## 5. ಪ್ರಥಮೇಽಶ್ರವಣಾಧಿಕರಣ

ಈ ಅಧಿಕರಣವು ಭೂತಗಳು ಜೀವನ ಜೊತೆಗೆ ಹೋಗುವದಿಲ್ಲ ಎಂದು ಶ್ರುತಿಗಳು ಹೇಳುವದಿಲ್ಲ ಎಂದು ಹೇಳುತ್ತದೆ.

**ಓಂ ಪ್ರಥಮೇಽಶ್ರವಣಾದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ಓಂ**

ಪ್ರಕೃತ ಭೂತಗಳೇ ವಿಷಯ. ಜೀವನೊಂದಿಗೆ ಭೂತಗಳಿಗೆ ಗಮನವಿದೆಯೋ ಇಲ್ಲವೋ ಎಂದು ಸಂಶಯ. ಮರಣಕಾಲದಲ್ಲಿ ಜೀವರೊಂದಿಗೆ ಕೆಲವು ವಸ್ತುಗಳಿಗೆ ಗಮನವಿರುವದು ಮತ್ತು ಅನೇಕ ವಸ್ತುಗಳಿಗೆ ಗಮನವಿಲ್ಲದಿರುವಿಕೆಯೂ ಕಂಡಿದೆ. ಆದ್ದರಿಂದ ಭೂತಗಳಿಗೆ ಗಮನವಿದೆಯೋ ಇಲ್ಲವೋ ಎಂದು ಸಂಶಯ.

'ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ' ಎಂದು ದ್ಯು ಎಂಬ ಪ್ರಥಮಾಗ್ನಿಯಲ್ಲಿ ಶ್ರದ್ಧಾಸಹಿತ ಹೋಮವು ಉಪಕ್ರಮದಲ್ಲಿ ಶ್ರುತವಾಗಿದೆ. ಅದರಂತೆ 'ಭೂತಾನಿ ಜುಹ್ವತಿ' ಎಂಬ ವಿಶೇಷೋಕ್ತಿಯು ಇಲ್ಲದಿರುವದರಿಂದ ಭೂತಗಳಿಗೆ ಜೀವನೊಂದಿಗೆ ಗಮನವಿಲ್ಲ ಆದ್ದರಿಂದ ಮರಣವೇ ಮೋಕ್ಷ ವೈರಾಗ್ಯಾದಿಗಳ ಅಗತ್ಯವಿಲ್ಲ ಎಂದು ಪೂರ್ವಪಕ್ಷ.

ಉಪಕ್ರಮವಾಕ್ಯಕ್ಕಿಂತಲೂ ಉಪಸಂಹಾರವು ಪ್ರಬಲ. ಉಪಸಂಹಾರಕ್ಕನುಗುಣವಾಗಿ ಉಪಕ್ರಮ-ವಾಕ್ಯಕ್ಕೆ ಅರ್ಥಮಾಡಬೇಕು. 'ಇತಿ ತು ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ' ಇದು ಉಪಸಂಹಾರವಾಕ್ಯ. ಇದಕ್ಕನುಗುಣವಾಗಿ ಉಪಕ್ರಮವಾಕ್ಯದಲ್ಲಿರುವ ಶ್ರದ್ಧಾಶಬ್ದಕ್ಕೆ ಅಜಹಲ್ಲಕ್ಷಣಾದಿಂದ ಶ್ರದ್ಧೆಯಿಂದಲೂ ತ್ಯಾತ್ಮಕವಾದ ಜಲದಿಂದಲೂ ವಿಶಿಷ್ಟನಾದ ಜೀವ ಎಂದು ಅರ್ಥ. ಈ ರೀತಿ ಭೂತ-ಗಳಿಗೂ ಜೀವನೊಂದಿಗೆ ಗಮನವಿರುವುದರಿಂದ ಮರಣವೇ ಮುಕ್ತಿಯಲ್ಲ. ಆದ್ದರಿಂದ ವೈರಾಗ್ಯಾದಿಗಳು ಅವಶ್ಯಕವಾಗಿವೆ.

## 6. ಅಶ್ರುತತ್ವಾಧಿಕರಣ

ಈ ಅಧಿಕರಣವು ಜೀವನ ಜೊತೆಗೆ ಭೂತಗಳು ಹೋಗುತ್ತವೆಯೆಂದೇ ಶ್ರುತಿ ಹೇಳುತ್ತದೆ ಎಂದು ಹೇಳುತ್ತದೆ.

**ಓಂ ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ಓಂ**

ಪ್ರಕೃತ ಭೂತಗಳೇ ವಿಷಯ. ಅವುಗಳಿಗೆ ಜೀವನೊಂದಿಗೆ ಗಮನವಿದೆಯೋ ಇಲ್ಲವೋ ಎಂದು ಸಂಶಯ. ಕೆಲವು ವಸ್ತುಗಳಿಗೆ ಗಮನವೂ ಕೆಲವು ವಸ್ತುಗಳಿಗೆ ಗಮನವಿಲ್ಲದಿರುವುದು ಕಂಡಿರುವುದೇ ಸಂಶಯಕ್ಕೆ ಕಾರಣ.

ಜೀವರೊಂದಿಗೆ ಭೂತಗಳಿಗೆ ಗಮನವನ್ನು ಪ್ರತಿಪಾದಿಸುವ ಶ್ರುತಿ ಇಲ್ಲ. 'ಯತ್ರಾಸ್ಯ ಪುರುಷಸ್ಯ ಮೃತಸ್ಯ ವಾಗಗ್ನಿಮಪ್ಯೇತಿ' ಇಂದ್ರಿಯಗಳು ಅಗ್ನ್ಯಾದಿದೇವತೆಗಳನ್ನು ಹೊಂದುತ್ತವೆ. ಎಂದು ಸ್ಪಷ್ಟಶ್ರುತಿ ಇರುವಂತೆ ಶ್ರುತಿಯಲ್ಲಿ ಭೂತಗಳಿಗೆ ಜೀವರೊಂದಿಗೆ ಗಮನವನ್ನು ಸ್ಪಷ್ಟವಾಗಿ ಹೇಳದಿರುವ ಕಾರಣ ಭೂತಗಳಿಗೆ ಜೀವರೊಂದಿಗೆ ಗಮನವಿಲ್ಲ ಆದ್ದರಿಂದ ವೈರಾಗ್ಯಾದಿಗಳು ವ್ಯರ್ಥ ಎಂದು ಪೂರ್ವಪಕ್ಷ.

'ಅಥೈನಂ ಯಜಮಾನಂ ಕಿಂ ನ ಜಹಾತಿ ಭೂತಾನ್ಯೇವ ಭೂತೈರೇವ ಗಚ್ಛತಿ' ಮುಂತಾದ ಬೇರೆ ಶ್ರುತಿಗಳಲ್ಲಿ ಜೀವನು ಭೂತಗಳೊಂದಿಗೆ ಹೋಗುತ್ತಾನೆ ಎಂದು ಸ್ಪಷ್ಟವಾಗಿ ಹೇಳಲ್ಪಟ್ಟಿದೆ. ಸ್ಥಾನಾಂತರ- ದಲ್ಲಿರುವ ಶ್ರುತಿಯು ಸಮಾಖ್ಯಾರೂಪವಾಗಿರುವದರಿಂದ ಇದು ನಿರ್ಣಾಯಕವಾಗಿದೆ ಎಂದು ಸಿದ್ಧಾಂತ.

## 7. ಭಾಕ್ತಾಧಿಕರಣ

ಈ ಅಧಿಕರಣವು ಜ್ಞಾನವೇ ಮೋಕ್ಷಸಾಧನವಾದ್ದರಿಂದ ಜ್ಞಾನಕ್ಕಾಗಿ ವೈರಾಗ್ಯಾದಿಗಳನ್ನು ಸಂಪಾದಿಸಬೇಕು ಎಂದು ಹೇಳುತ್ತಿದೆ.

**ಓಂ ಭಾಕ್ತಂ ವಾಽನಾತ್ಮವಿತ್ತ್ವಾತ್ತಥಾ ಹಿ ದರ್ಶಯತಿ ಓಂ**

ವೈರಾಗ್ಯಾದಿಸಾಧನಗಳೇ ಈ ಅಧಿಕರಣಕ್ಕೆ ವಿಷಯ. ಮೋಕ್ಷಾಭಿಲಾಷಿಯು ಅವುಗಳನ್ನು ಅನುಷ್ಠಾನ ಮಾಡಬೇಕೋ ಬೇಡವೋ ಎಂದು ಸಂಶಯ. ಲೋಕದಲ್ಲಿ ತೃಪ್ತಿಸಾಧನ ಭೋಜನಾದಿಗಳ ಅನುಷ್ಠಾನ ಹಾಗೂ ರಸಾಯನ ಪಾನಾದಿಗಳ ಅನನುಷ್ಠಾನ ಹೀಗೆ ಎರಡೂ ಕಾಣಿಸಿರುವುದು ಸಂಶಯಕ್ಕೆ ಕಾರಣವಾಗಿದೆ.

'ಅಪಾಮ ಸೋಮಮಮೃತಾ ಅಭೂಮ' ಎಂಬ ಶ್ರುತಿಯಿಂದ ಕರ್ಮವು ಮೋಕ್ಷಸಾಧನವೆಂದು ಸಿದ್ಧವಾಗುತ್ತದೆ. ಆದ್ದರಿಂದ ಜ್ಞಾನವೈರಾಗ್ಯಾದಿಗಳು ಅನುಷ್ಠೇಯ ಎನ್ನುವದು ಉಚಿತವಲ್ಲ. ಸುಲಭವಾದ ಮಾರ್ಗವಿರುವಾಗ ಕ್ಲೇಶದಾಯಕಮಾರ್ಗವು ಅನಾದರಣೀಯ. ಸುಲಭವಾದ ಕರ್ಮದಿಂದ ಮೋಕ್ಷವು ದೊರಕುವಾಗ ವೈರಾಗ್ಯಾದಿಗಳ ಅನುಷ್ಠಾನವು ವ್ಯರ್ಥ ಎಂದು ಪೂರ್ವಪಕ್ಷ.

ಜ್ಞಾನವೇ ಮೋಕ್ಷಸಾಧನ. ಕೇವಲ ಕರ್ಮದಿಂದ ಸಂಸಾರ ನಿವೃತ್ತಿಯಾಗುವುದಿಲ್ಲ. 'ತಮೇವಂ ವಿದ್ವಾನ್ ಅಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತೇ' ಮುಂತಾದ ಶ್ರುತಿಗಳು ಇತರ ಮಾರ್ಗವನ್ನು ನಿಷೇಧಿಸುತ್ತಿವೆ. 'ಕರ್ಮಣಾ ಜ್ಞಾನಮಾತನೋತಿ' ಎಂಬ ಶ್ರುತಿ ಇದ್ದರೂ ಕರ್ಮವು ಸಾಕ್ಷಾತ್ತಾಗಿ ಮೋಕ್ಷಸಾಧನವಲ್ಲ. ಪರಂಪರಯಾ ಕಾರಣವಾಗಿದೆ. ಜ್ಞಾನಕ್ಕಿಂತ ಪೂರ್ವದಲ್ಲಿ ಆಚರಿಸುವ ನಿಷ್ಕಾಮಕರ್ಮವು ಅಂತಃಕರಣವನ್ನು ಶುದ್ಧವನ್ನಾಗಿಸಿ ವೈರಾಗ್ಯಾದಿದ್ವಾರಾ ಮೋಕ್ಷಸಾಧನವಾಗಿದೆ. ಜ್ಞಾನೋತ್ತರದಲ್ಲಿ ಆಚರಿಸುವ ನಿಷ್ಕಾಮಕರ್ಮವು ಮೋಕ್ಷದಲ್ಲಿ ಆನಂದಾತಿಶಯಕ್ಕೆ ಕಾರಣವಾಗುತ್ತದೆ. ಕಾಮ್ಯಕರ್ಮಿಗೆ ಹೇಳಿದ ಮೋಕ್ಷವು ಮುಖ್ಯವಾದುದ್ದಲ್ಲ. ಕೇವಲ ಬಹುಕಾಲ ಸುಖಜೀವನರೂಪವಾದ ಗೌಣವಾದ ಮೋಕ್ಷ. ಆದ್ದರಿಂದ ಮುಖ್ಯವಾದ ಮೋಕ್ಷವನ್ನು ಹೊಂದಲು ಜ್ಞಾನಕ್ಕಾಗಿ ವೈರಾಗ್ಯಾದಿಗಳು ಅನುಷ್ಠೇಯವೇ ಆಗಿದೆ ಎಂದು ಸಿದ್ಧಾಂತ.

## 8. ಕೃತಾತ್ಯಯಾಧಿಕರಣ

**ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಂ ಓಂ**

ಈ ಅಧಿಕರಣದಲ್ಲಿ ಸಂಪೂರ್ಣಕರ್ಮಕ್ಷಯವು ಅಸಾಧ್ಯವಾದುದರಿಂದ ವೈರಾಗ್ಯಾದಿಸಾಧನ ಅವಶ್ಯಕ ಎಂದು ಹೇಳಿಲಾಗಿದೆ.

**ಓಂ ಕೃತಾತ್ಯಯೇಽನುಶಯವಾನ್ ದೃಷ್ಟಸ್ಮೃತಿಭ್ಯಾಮ್ ಓಂ**

ವೈರಾಗ್ಯಾದಿಗಳೇ ವಿಷಯ. ಮುಮುಕ್ಷುವಿನಿಂದ ಅವಶ್ಯ ಅನುಷ್ಠೇಯವೋ ಅಥವಾ ಅಲ್ಲವೋ ಎಂದು ಸಂಶಯ. ಕೇವಲ ಮರಣದಿಂದ ಮೋಕ್ಷವಿಲ್ಲವೆಂದು ಹಿಂದೆ ಹೇಳಿರುವುದು ಮತ್ತು ಕರ್ಮಕ್ಷಯದಿಂದ ಮೋಕ್ಷಫಲವಾಗುವುದು ಕಂಡಿರುವದು ಸಂಶಯಕ್ಕೆ ಕಾರಣ.

ಇಲ್ಲಿ ಪೂರ್ವಪಕ್ಷವು ಹೀಗಿದೆ. ಮಾಡಿರುವ ಕರ್ಮವು ಭೋಗದಿಂದ ಕ್ಷಯ ಹೊಂದಿ ನಂತರ ನಿಮಿತ್ತವಾದ ಕರ್ಮವಿಲ್ಲವಾದ ಕಾರಣ ಜೀವನಿಗೆ ಸಂಸಾರವು ಇಲ್ಲ. ಈ ಲೋಕದಲ್ಲಿದ್ದಾಗ ಭೋಗ-ಕಾಲದಲ್ಲಿ ಬೇರೆ ಕರ್ಮಗಳನ್ನು ಆಚರಿಸಿದರೂ ಸ್ವರ್ಗದಲ್ಲಿ ಇತರ ಕರ್ಮಾನುಷ್ಠಾನದ ನಿಯಮವಿಲ್ಲವಾದ ಕಾರಣ ಕರ್ಮಕ್ಷಯದಿಂದಲೇ ಸಂಸಾರನಿವೃತ್ತಿಯುಂಟಾಗುತ್ತದೆ. ಆದ್ದರಿಂದ ವೈರಾಗ್ಯಾದಿಗಳ ಅನುಷ್ಠಾನ ಮಾಡುವುದು ಬೇಕಿಲ್ಲ.

'ತತಃ ಶೇಷೇಣೇಮಂ ಲೋಕಮಾಯಾತಿ ಪುನಃ ಕರ್ಮ ಕುರುತೇ' ಈ ಶ್ರುತಿಯು ಹೇಳುವಂತೆ ಜೀವನು ಸ್ವರ್ಗದಿಂದ ಹಿಂತೆರಳುವಾಗ ಕರ್ಮಶೇಷ ಸಹಿತವಾಗಿಯೇ ಇರುತ್ತಾನೆ. ಸಂಪೂರ್ಣ-ಕರ್ಮಕ್ಷಯವು ಆಗುವುದೇ ಇಲ್ಲ. ಒಂದು ಕರ್ಮದ ಫಲವನ್ನು ಭೋಗಿಸುವಾಗ ಮತ್ತೆ ಅನಂತ-ಕರ್ಮಗಳನ್ನು ಮಾಡುತ್ತಾನೆ. ಆದ್ದರಿಂದ ವೈರಾಗ್ಯಾದಿಸಾಧನವು ಅವಶ್ಯಕವಾಗಿದೆ.

## 9. ಯಥೇತಾಧಿಕರಣ

ಜೀವನು ಯಾವ ಮಾರ್ಗದಲ್ಲಿ ಹೋಗಿರುತ್ತಾನೆಯೋ ಅದೇ ಮಾರ್ಗದಲ್ಲಿ ಪುನಃ ಬರುವದಿಲ್ಲ ಎಂಬ ವಿಷಯವನ್ನು ಈ ಅಧಿಕರಣದಲ್ಲಿ ಹೇಳುತ್ತಿದ್ದಾರೆ.

**ಓಂ ಯಥೇತಮನೇವಂ ಚ ಓಂ**

ಈ ಅಧಿಕರಣಕ್ಕೆ ಆಗಮನವೇ ವಿಷಯ. ಕಾಮ್ಯಕರ್ಮಿಯು ಯಾವ ಮಾರ್ಗದಿಂದ ಸ್ವರ್ಗಕ್ಕೆ ಹೋಗಿರುತ್ತಾನೆಯೋ ಆ ಮಾರ್ಗದಿಂದ ಹಿಂತೆರಳುತ್ತಾನೋ ಅಥವಾ ಬೇರೆ ಮಾರ್ಗದಿಂದಲೋ ಎಂದು ಸಂಶಯ. ಲೋಕದಲ್ಲಿ ಆಗಮನವು ಎರಡೂ ರೀತಿಯಲ್ಲಿ ಕಾಣಿಸಿರುವುದು ಸಂಶಯಕ್ಕೆ ಕಾರಣ.

ಕಾಮ್ಯಕರ್ಮದಿಂದ ಸ್ವರ್ಗವನ್ನು ಹೊಂದಿದ ಜೀವನಿಗೆ ಸ್ವರ್ಗದಿಂದ ಹಿಂತೆರಳುವಾಗ ಗಮನಮಾರ್ಗದ ಅನುಭವಸಂಸ್ಕಾರ ಇರುವ ಕಾರಣ ತಿಳಿದ ಅದೇ ಮಾರ್ಗದಿಂದ ಹಿಂತಿರುಗಿ ಹೋಗುತ್ತಾನೆ. ಶ್ರುತಿಯು ಹೀಗೆ ಹೇಳುತ್ತಿದೆ. ಇದರಿಂದ ಅತಿಕ್ಲೇಶ ಇಲ್ಲ. ತಿಳಿಯದ ಬೇರೆ ಮಾರ್ಗದಿಂದ ಬರುವದಾದರೆ ಮಾತ್ರ ಅದು ಕ್ಲೇಶದಾಯಕ ಎಂದು. ಇಷ್ಟು ಪೂರ್ವಪಕ್ಷ.

ಇದಕ್ಕೆ ಸಮಾಧಾನವನ್ನು ಹೇಳುವ ಸಿದ್ಧಾಂತ ವಚನಗಳು ಹೀಗಿವೆ. 'ಧಾಮಾದಭ್ರಮಭ್ರಾದಾಕಾಶಂ ಆಕಾಶಾಚ್ಚಂದ್ರಲೋಕಂ' ಎಂಬ ಶ್ರುತಿಯು ಬೇರೆ ಮಾರ್ಗದಿಂದಲೂ ಜೀವನು ಬರುತ್ತಾನೆ ಎಂದು ಹೇಳುತ್ತದೆ. ಹಿಂತಿರುಗಿ ಬರಲು ಜೀವನಿಗೆ ಸ್ವಾತಂತ್ರ್ಯವೇ ಇಲ್ಲದಿರುವಾಗ ಅವನಿಗೆ ಮಾರ್ಗದಿಂದಲೇ ಹಿಂತೆರಳುತ್ತಾನೆ ಎಂದು ನಿಯಮವಿಲ್ಲ. ಸ್ವಲ್ಪ ಅದೇ ಮಾರ್ಗದಿಂದ ಬಂದು ಬಳಿಕ ಬೇರೆ ಮಾರ್ಗ-ದಿಂದಲೂ ಬರುತ್ತಾನೆ. ಆದ್ದರಿಂದ ಶ್ರುತಿವಿರೋಧವಿಲ್ಲ. ಹೀಗೆ ಆಗಮನವು ಕ್ಲೇಶಯುಕ್ತವಾದ್ದರಿಂದ ಸ್ವರ್ಗಫಲದಲ್ಲಿಯೂ ವೈರಾಗ್ಯವು ಅವಶ್ಯಕವೆಂದು ತಿಳಿಯುತ್ತದೆ.

## 10. ಚರಣಾಧಿಕರಣ

ಈ ಅಧಿಕರಣವು ಗಮನಾಗಮನವು ಕರ್ಮದಿಂದಲೇ ಆಗುವದರಿಂದ ಕರ್ಮದಲ್ಲಿ ವಿರಕ್ತನಾಗಬೇಕು ಎಂದು ಹೇಳುತ್ತದೆ. ಇಲ್ಲಿ ಒಟ್ಟು ಮೂರು ಸೂತ್ರಗಳಿವೆ.

**ಓಂ ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ**
**ಓಂ ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ಓಂ**
**ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ**

ಗಮನಾಗಮನವೇ ಈ ಅಧಿಕರಣಕ್ಕೆ ವಿಷಯ. ಯಜ್ಞಾದಿಕರ್ಮಗಳು ಗಮನಾಗಮನಗಳಿಗೆ ಸಾಧನವೋ ಅಲ್ಲವೋ ಎಂದು ಸಂಶಯ. ಕರ್ಮ ಮತ್ತು ಆಚಾರ ಇವೆರಡಕ್ಕೂ ಗಮನಾಗಮನರೂಪಕಾರ್ಯದೊಂದಿಗೆ ಸಹಭಾವವು ಕಂಡಿರುವದು ಸಂಶಯಕ್ಕೆ ಕಾರಣ.

'ರಮಣೀಯಚರಣಾಃ ಕಪೂಯಚರಣಾಃ' ಮುಂತಾದ ಶ್ರುತಿಗಳು ಹೇಳುವಂತೆ ಗಮನಾಗಮನಗಳಿಗೆ ಆಚಾರವೇ ಸಾಧನ. ಯಜ್ಞಾದಿಕರ್ಮಗಳು ಸಾಧನವಲ್ಲ. 'ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ' ಎಂಬಲ್ಲಿ ಉಪಶಬ್ದವು ಸಮೀಪ ಎಂಬ ಅರ್ಥದಲ್ಲಿದೆ. ಆಚಾರವು ಯಜ್ಞಾದಿಗಳ ಸಮೀಪದಲ್ಲಿ ಜೊತೆಗಿರುವುದು. ಹೀಗೆ ಯಜ್ಞಾದಿಕರ್ಮ ಮತ್ತು ಆಚಾರಗಳೆರಡು ಸಹಪಠಿತವಾಗಿರುವದರಿಂದ ವಸ್ತುತಃ ಆಚಾರಫಲವಾದ ಗಮನಾಗಮನಗಳು ಯಜ್ಞಾದಿಕರ್ಮದ ಫಲವೆಂದು ಭ್ರಾಂತಿಯು ಉಂಟಾಗಿದೆ. ವಾಸ್ತವಿಕವಾಗಿ ಯಜ್ಞಾದಿಗಳು ಮೋಕ್ಷಸಾಧನ. ಆದಕಾರಣ ವೈರಾಗ್ಯಾದಿಗಳ ಅಗತ್ಯವಿಲ್ಲ ಎಂದು ಪೂರ್ವಪಕ್ಷ.

'ನಾನ್ಯಃ ಪಂಥಾ ಅಯನಾಯ ವಿದ್ಯತೇ' ಈ ನಿರವಕಾಶಶ್ರುತಿಯು ಮೋಕ್ಷಕ್ಕೆ ಜ್ಞಾನದ ಹೊರತಾಗಿ ಇತರವಾದ ಕರ್ಮಾದಿಮಾರ್ಗಗಳನ್ನು ನಿಷೇಧಿಸುತ್ತಿದೆ. 'ಇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಂ' 'ಅಥ ಯೇ ಯಜ್ಞೇನ ದಾನೇನ ತದ್ಯ ಇಹ ರಮಣೀಯಚರಣಾಃ ರಮಣೀಯಾಂ ಯೋನಿಮಾಪದ್ಯಂತೇ' ಮುಂತಾದ ಶ್ರುತಿಗಳು 'ತ್ರೈವಿದ್ಯಾಂ ಸೋಮಪಾಃ' ಮುಂತಾದ ಸ್ಮೃತಿಗಳು ಗಮನಾಗಮನಗಳನ್ನು ಕರ್ಮದ ಫಲವೆಂದು ಪ್ರತಿಪಾದಿಸುತ್ತಿವೆ. ಆದ್ದರಿಂದ ಶ್ರುತಿಯಲ್ಲಿರುವ ಚರಣಶಬ್ದವು ಅಜಹಲ್ಲಕ್ಷಣಾದಿಂದ ಯಜ್ಞಾದಿಕರ್ಮವನ್ನು ಹೇಳುತ್ತಿದೆ ಆದ್ದರಿಂದ ಗಮನಾಗಮನಗಳು ಕರ್ಮದ ಫಲವೆಂದು ಕಾರ್ಷ್ಣಾಜಿನಿ ಆಚಾರ್ಯರು ಅಭಿಪ್ರಾಯಪಡುತ್ತಾರೆ ಆದ್ದರಿಂದ ಕ್ಲೇಶಸಾಧನವಾದ ಕರ್ಮದಲ್ಲಿ ಹಾಗೂ ಸ್ವರ್ಗಾದಿಗಳಲ್ಲಿ ವೈರಾಗ್ಯವು ಯುಕ್ತವೇ ಆಗಿದೆ.

## 11. ಅನಿಷ್ಟಾಧಿಕರಣ

ಈ ಅಧಿಕರಣದಲ್ಲಿ ಪಾಪಿಗಳಿಗೂ ಗಮನಾಗಮನವು ತಪ್ಪಿದ್ದಲ್ಲ ಎಂದು ಹೇಳುತ್ತಿದ್ದಾರೆ.

**ಓಂ ಅನಿಷ್ಟಾದಿಕಾರಿಣಾಮಪಿ ಚ ಶ್ರುತಮ್ ಓಂ**

**ಓಂ ಸಂಯಮನೇ ತ್ವನುಭೂಯೇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ಓಂ**

**ಓಂ ಸ್ಮರಂತಿ ಚ ಓಂ**

ಗಮನಾಗಮನವೇ ಈ ಅಧಿಕರಣಕ್ಕೆ ವಿಷಯ. ಇದು ಕೇವಲ ಯಾಗಾದಿಗಳನ್ನು ಆಚರಿಸು- ವವರಿಗೋ ಅಥವಾ ಎಲ್ಲ ಅಜ್ಞಾನಿಗಳಿಗೋ ? ಎಂದು ಸಂಶಯ. ಯಜ್ಞಾದಿವಿಶೇಷಗಳನ್ನು ಹೇಳಿದ್ದು ಮತ್ತು ಅಜ್ಞಾನಿತ್ವವು ಸಂಶಯಕ್ಕೆ ಕಾರಣ.

ಯಜ್ಞಯಾಗಾದಿಗಳನ್ನು ಮಾಡುವವರಿಗೆ ವಿಧಿನಿಷೇಧಗಳ ಭೀತಿ ಪ್ರತ್ಯವಾಯದ ಭೀತಿ, ಫಲದ ಬಯಕೆಗಳಿವೆ. ಕಾರಣ ಇವರಿಗೆ ಗಮನಾಗಮನಾದಿದುಃಖಗಳು ಯಾಗಾದಿಗಳನ್ನು ಮಾಡದಿರುವ ಅಜ್ಞಾನಿಗಳಿಗೆ ಪಾಪಿಗಳಿಗೆ ಅವುಗಳು ಇಲ್ಲದಿರುವ ಕಾರಣ ಅವರಿಗೆ ಈ ದುಃಖವಿಲ್ಲ ಮೋಕ್ಷವೇ ಫಲ. ಆದ್ದರಿಂದ ಪುಣ್ಯಕಾರ್ಯದಲ್ಲಿ ವೈರಾಗ್ಯವನ್ನು ತಾಳಬೇಕು.

'ತದ್ಯ ಇಹ ಶುಭಕೃತೋ ಯೇ ಚಾಶುಭಕೃತಸ್ತೇ ಅಶುಭಮನುಭೂಯಾವರ್ತಂತೇ' ಇವೇ ಮುಂತಾದ ಶ್ರುತಿಗಳು ಹೇಳುವಂತೆ ಪಾಪಕಾರ್ಯವನ್ನು ಮಾಡುವ ಅಜ್ಞಾನಿಗಳಿಗೂ ದುಃಖಾದಿಗಳು ಗಮನಾಗಮನಗಳಲ್ಲಿ ಇರುವದರಿಂದ ಅವರಿಗೆ ಮೋಕ್ಷರೂಪ ಫಲವಿಲ್ಲ. ಆದ್ದರಿಂದ ಗಮನಾಗಮನವು ಎಲ್ಲ ಅಜ್ಞಾನಿಗಳಿಗೂ ಇದೆ.

## 12. ಅಪಿ ಸಪ್ತಾಧಿಕರಣ

ಈ ಅಧಿಕರಣದಲ್ಲಿ ನರಕಗಳು ಏಳುವಿಧ ಎಂದು ಹೇಳಲಾಗಿದೆ.

**ಓಂ ಸಪ್ತ ಅಪಿ ಓಂ**

ಪ್ರಕೃತ ನರಕವೇ ಈ ಅಧಿಕರಣದ ವಿಷಯ. ನರಕದ ದುಃಖಭೋಗವು ನಿತ್ಯವೋ ? ಅನಿತ್ಯವೋ ? ಎಂದು ಸಂಶ್ಯಯ. ಹಿಂದಿನ ಅಧಿಕರಣದಲ್ಲಿ ಹೇಳಿದ ಅವರೋಹ ಮತ್ತು ಲೋಕದಲ್ಲಿ ಕಂಡಿರುವ ಕಾರಾಗೃಹಶಿಕ್ಷೆಯಿಂದ ಬಿಡುಗಡೆ ಇದು ಸಂಶಯಕ್ಕೆ ಕಾರಣ.

'ಯಾವದಿಂದ್ರಾಶ್ಚತುರ್ದಶ' ಎಂದು ಮತ್ತು 'ಚಕಾರ ನರಕಂ ಶೂನ್ಯಮ್' ಎಂದು ಹೇಳುವದರಿಂದ ನಿತ್ಯನರಕವು ಇಲ್ಲ. ಆದ್ದರಿಂದ 'ತಾಮಿಸ್ರಾಶ್ಚಾಂಧತಾಮಿಸ್ರೋ ದ್ವೌ ನಿತ್ಯೌ' ಎಂದು ವಿರುದ್ಧವಾಗಿ ಹೇಳಿದ್ದು ಅಯುಕ್ತವಾಗಿದೆ. ಆದಕಾರಣ ಇತರ ಪಾಪಗಳಿಗಿಂತ ಅಧಿಕವಾಗಿ ಭಗವಂತನ ದ್ವೇಷದಲ್ಲಿ ವೈರಾಗ್ಯವನ್ನು ತಾಳುವ ಅಗತ್ಯವಿಲ್ಲ.

ನರಕವು ಒಂದೇ ವಿಧವಲ್ಲ. ಅದರಲ್ಲಿ ಅನೇಕ ವಿಭಾಗಗಳಿವೆ. 'ರೌರವೋಽಥ ಮಹಾಂಶ್ಚೈವ ವಹ್ನಿರ್ವೈತರಣೀ ತಥಾ' ಮುಂತಾದ ಪ್ರಮಾಣಗಳಿಗನುಸಾರವಾಗಿ ಏಳು ಮುಖ್ಯನರಕಗಳಿವೆ. 'ಯಾವದಿಂದ್ರಾಶ್ಚತುರ್ದಶ ಚಕಾರ ನರಕಂ ಶ್ಯೂನಂ' ಈ ವಾಕ್ಯಗಳೆಲ್ಲವೂ ರೌರವಾದಿ ಐದು ನರಕಗಳನ್ನು ಹೇಳುತ್ತಿದೆ. 'ನೈವೈತ ಉತ್ತಿಷ್ಠಂತೇ ಅಪಿ ಕರ್ಹಿಚಿತ್' ಮುಂತಾದ ಶ್ರುತಿಗಳಿರುವದರಿಂದ ತಾಮಿಸ್ರ ಅಂಧತಾಮಿಸ್ರ ಎಂಬ ಉಳಿದ ಎರಡು ನರಕಗಳು ನಿತ್ಯವಾಗಿವೆ. ಭಗವಂತನಲ್ಲಿ ದ್ವೇಷವನ್ನು ಮಾಡಿದವನು ನಿತ್ಯನರಕವನ್ನೇ ಹೊಂದುವನು. ಆದ್ದರಿಂದ ಇತರ ಪಾಪಗಳಿಗಿಂತಲೂ ಭಗವದ್ವೇಷದಲ್ಲಿ ಹೆಚ್ಚು ವೈರಾಗ್ಯವನ್ನು ತಾಳಬೇಕು.

## 13. ತತ್ರಾಪ್ಯಧಿಕರಣ

ಈ ಅಧಿಕರಣದಲ್ಲಿ ನರಕದಲ್ಲಿಯೂ ಪ್ರೇರಕನಾದ ಭಗವಂತನಿಗೆ ದುಃಖವಿಲ್ಲ ಎಂದು ಹೇಳಲಾಗಿದೆ.

**ಓಂ ತತ್ರಾಪಿ ಚ ತದ್ವ್ಯಾಪಾರದವಿರೋಧಃ ಓಂ**

ನರಕವೇ ಈ ಅಧಿಕರಣದ ವಿಷಯ. ನರಕವು ದುಃಖರೂಪವೋ ? ಅಲ್ಲವೋ ? ಎಂದು ಸಂಶಯ. ಮೂರ್ಛಾವಸ್ಥೆಯಲ್ಲಿ ದುಃಖವೂ, ಸುಷುಪ್ತ್ಯವಸ್ಥೆಯಲ್ಲಿ ದುಃಖರಾಹಿತ್ಯವು ಕಂಡಿದೆ. ಇದೇ ಸಂಶಯಕ್ಕೆ ಕಾರಣ.

'ಸರ್ವಂ ನಿಯಮಯತಿ' ಎಂದು ಶ್ರುತಿಯಿರುವುದರಿಂದ ನರಕದಲ್ಲಿಯೂ ನಾರಕಿಗಳ ನಿಯಮನ-ಕ್ಕಾಗಿ ಈಶ್ವರನಿದ್ದಾನೆ. ನರಕವು ದುಃಖರೂಪವೆಂದಾಗ ನಾರಕಿಗಳಿಗೂ ಈಶ್ವರನಿಗೂ ಸಹಭಾವ ಇರುವದರಿಂದ ಈಶ್ವರನೂ ದುಃಖಿಯಾಗಬೇಕಾದೀತು ಆ ಕಾರಣದಿಂದ ನಾರಕಿಗಳಿಗೆ ನರಕದುಃಖದಿಂದ ಉಂಟಾಗುವ ನೀಚತ್ವವು ಇಲ್ಲ ಎನ್ನಬೇಕಾಗುತ್ತದೆ. ಆದ್ದರಿಂದ ನರಕವು ದುಃಖರೂಪವಲ್ಲ ಆದಕಾರಣ ವೈರಾಗ್ಯದ ಅಗತ್ಯವಿಲ್ಲ.

ನರಕವು ದುಃಖರೂಪವಾಗಿದೆ. ಈಶ್ವರನು ದುಃಖಿಗಳ ಜೊತೆಗೆ ಇದ್ದರೂ ಅವನಿಗೆ ದುಃಖ-ಭೋಗವಿಲ್ಲ, ಜೀವನಿಗೆ ಇದೆ. ಅವನ ಸ್ವರೂಪದಲ್ಲಿ ಸುಖದಿಂದ ವಿಕಾಸ. ದುಃಖದಿಂದ ಸಂಕೋಚ ಇದೆ. ಈಶ್ವರನಿಗೆ ದುಃಖಾನುಭವವಿದ್ದರೂ ಸಂಕೋಚರೂಪವಾದ ದುಃಖಭೋಗವಿಲ್ಲ. ಆದ್ದರಿಂದ ಜೀವನಿಗೆ ದುಃಖರೂಪವಾದ ನರಕ ಇರುವದರಿಂದ ವೈರಾಗ್ಯವು ಅವಶ್ಯಕವಾಗಿದೆ.

## 14. ವಿದ್ಯಾಧಿಕರಣ

ಈ ಅಧಿಕರಣದಲ್ಲಿ ದೇವಯಾನ ಪಿತೃಯಾನದಲ್ಲಿ ಸಾಗಿದ ಜೀವನಿಗೆ ಸ್ವಾತಂತ್ರ್ಯವಿಲ್ಲ ಎಂದು ಹೇಳಲಾಗಿದೆ.

**ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ**

ಪಿತೃಯಾನ ದೇವಯಾನಗಳೇ ಈ ಅಧಿಕರಣದ ವಿಷಯ. ಜೀವನಿಗೆ ಗಮನದಲ್ಲಿ ಸ್ವಾತಂತ್ರ್ಯವು ಇದೆಯೋ ಇಲ್ಲವೋ ಎಂದು ಸಂಶಯ. ಲೌಕಿಕಮಾರ್ಗಗಮನದಲ್ಲಿ ಸ್ವಾತಂತ್ರ್ಯವು ಕಂಡಿದೆ ಆದರೆ ಈ ಮಾರ್ಗವು ಅಲೌಕಿಕವಾಗಿದೆ. ಆದ್ದರಿಂದ ಸಂಶಯವು ಉಂಟಾಗುತ್ತದೆ.

'ಅಥೈತಯೋಃ ಪಥೋರ್ನ ಕತರೇಣ ಚ ತಾನೀಮಾನಿ ಕ್ಷುದ್ರಮಿಶ್ರಾಣಿ' ಎಂಬ ಶ್ರುತಿಯಲ್ಲಿ ಏತಯೋಃ ಎಂಬುದರಿಂದ ಪೂರ್ವಪ್ರಕೃತವಾದ ದೇವಯಾನ ಪಿತೃಯಾನ ಮಾರ್ಗಗಳನ್ನು ಗ್ರಹಿಸಬೇಕು. ಜ್ಞಾನವನ್ನು ಸಂಪಾದಿಸುವವರು ದೇವಯಾನ ಮಾರ್ಗದಿಂದ ಮೋಕ್ಷವನ್ನು ಪಡೆಯುವರು. ಕಾಮ್ಯ-ಕರ್ಮಗಳಲ್ಲಿ ಆಸಕ್ತನಾದವನು ಪಿತೃಯಾನಮಾರ್ಗದಿಂದ ಚಂದ್ರಲೋಕಾದಿಗಳಿಗೆ ತೆರಳುವನು. ಈ ಎರಡು ಮಾರ್ಗದಲ್ಲಿ ಹೋಗದವರು ಜನ್ಮ-ಮರಣಗಳ ಸುಳಿಯಲ್ಲಿ ಸಿಲುಕುವರು. ಪ್ರಕೃತ ಶ್ರುತಿಯಲ್ಲಿ 'ಹೋಗದವರು' ಎಂದು ಹೇಳಿರುವದರಿಂದ ಹೋಗುವ ಸ್ವಾತಂತ್ರ್ಯ ಉಕ್ತವಾಗಿದೆ. ಅಲ್ಲದೇ ಫಲ ಮತ್ತು ಸಾಧನಗಳು ಜೊತೆಗೆ ಪಠಿತವಾಗಿವೆ. ಸಾಧನದಲ್ಲಿ ಜೀವರಿಗೆ ಈಶಾಧೀನಸ್ವಾತಂತ್ರ್ಯವಿರುವಂತೆ ಫಲವಾದ

ಗಮನದಲ್ಲಿಯೂ ಜೀವನಿಗೆ ಸ್ವಾತಂತ್ರ್ಯವಿರುವದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯ ಅನಾವಶ್ಯಕ ಎಂದು ಪೂರ್ವಪಕ್ಷ.

'ತದ್ಯ ಇತ್ಥಂ ವಿದುರ್ಯೇ ಚೇಮೇ ಅರಣ್ಯೇ ಶ್ರದ್ಧಾ ತಪ ಇತ್ಯುಪಾಸತೇ' 'ತೇ ಅರ್ಚಿಷಮಭಿಸಂಭವಂತಿ' 'ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಂ' ಈ ಶ್ರುತಿವಾಕ್ಯಗಳಲ್ಲಿ ದೇವಯಾನಾದಿಮಾರ್ಗರೂಪಫಲದ ಜೊತೆಗೆ ವಿದ್ಯಾಕರ್ಮರೂಪಸಾಧನಗಳೂ ಪ್ರಸಕ್ತವಾಗಿವೆ. ಏತಯೋಃ ಎಂಬುದರಿಂದ ಆ ವಿದ್ಯಾಕರ್ಮರೂಪಸಾಧನಗಳನ್ನೇ ಗ್ರಹಿಸಬೇಕು ಫಲಗಳನ್ನಲ್ಲ. ಮಹಾಭಾರತವಚನವು ಇದಕ್ಕೆ ಆಧಾರವಾಗಿದೆ. ಶ್ರುತಿಗಳು ಜೀವರಿಗೆ ಸಾಧನಗಳನ್ನು ವಿಧಾನ ಮಾಡುವದರಿಂದ ಆ ವಿಷಯದಲ್ಲಿ ಈಶ್ವರನು ಅವರಿಗೆ ಕಿಂಚಿತ್ ಸ್ವಾತಂತ್ರ್ಯವನ್ನು ನೀಡುತ್ತಾನೆ ಎಂದು ಒಪ್ಪಬೇಕು. ಓಂ ಕರ್ತಾ ಶಾಸ್ತ್ರಾರ್ಥತ್ವಾತ್ ಓಂ ಸೂತ್ರವೇ ಈ ವಿಷಯದಲ್ಲಿ ಆಧಾರ. ಆದರೆ ಗಮನರೂಪವಾದ ಫಲದಲ್ಲಿ ವಿಧಿ ಇಲ್ಲ. ಆದ್ದರಿಂದ ಸ್ವಾತಂತ್ರ್ಯವಿಲ್ಲ. ಆದಕಾರಣ ಕಾಮ್ಯಕರ್ಮದಲ್ಲಿ ವೈರಾಗ್ಯಬೇಕು.

## 15. ನ ತೃತೀಯಾಧಿಕರಣ

ಈ ಅಧಿಕರಣದಲ್ಲಿ ತಮಸ್ಸಿನಲ್ಲಿ ಲವಲೇಶವೂ ಸುಖವಿಲ್ಲ ಎಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ಒಟ್ಟು ಐದು ಸೂತ್ರಗಳಿವೆ.

**ಓಂ ನ ತೃತೀಯೇ ತಥೋಪಲಬ್ಧೇಃ ಓಂ**

**ಓಂ ಸ್ಮರ್ಯತೇಽಪಿ ಚ ಲೋಕೇ ಓಂ**

**ಓಂ ದರ್ಶನಾಚ್ಚ ಓಂ**

**ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ**

**ಓಂ ಸ್ಮರಣಾಚ್ಚ ಓಂ**

ಅಂಧತಮಸ್ಸೇ ವಿಷಯ. ಅಲ್ಲಿ ಸುಖವು ಇದೆಯೋ ಇಲ್ಲವೋ ಎಂದು ಸಂಶಯ. ಲೋಕದಲ್ಲಿ ಸುಖದುಃಖಗಳಿಗೆ ಸಹಭಾವವು ಕಂಡಿದೆ. ಆದರೆ ತಮಸ್ಸು ಅಲೌಕಿಕವಾಗಿದೆ. ಇದೇ ಸಂಶಯಕ್ಕೆ ಕಾರಣ.

'ಯತ್ರ ದುಃಖಂ ಸುಖಂ ತತ್ರ' ಎಂದು ವಚನವಿರುವದರಿಂದ ಸುಖದುಃಖಗಳಿಗೆ ವ್ಯಾಪ್ತಿಯು ಸಿದ್ಧವಾಗಿದೆ. ಆದ್ದರಿಂದ ತಮಸ್ಸಿನಲ್ಲಿಯೂ ಸುಖವಿದೆ. ಆದ್ದರಿಂದ ಭಗವದ್ವೇಷಾದಿಗಳಲ್ಲಿ ಅತಿಶಯವಾದ ವೈರಾಗ್ಯವನ್ನು ಸಂಪಾದಿಸಬೇಕಿಲ್ಲ ಎಂದು ಪೂರ್ವಪಕ್ಷ.

ಇದಕ್ಕೆ ಸಿದ್ಧಾಂತವಚನಗಳಿಂದ ಹೀಗೆ ಉತ್ತರಿಸಲಾಗಿದೆ. ತಮಸ್ಸಿನಲ್ಲಿ ಸುಖವು ಇಲ್ಲ. 'ನ ತಮಃ ಸುಖಾನುವೃತ್ತಂ ಕೇವಲಂ ಹ್ಯೇವಾತ್ರ ದುಃಖಂ ಭವತಿ' ಎಂದು ಶ್ರುತಿ ಇದನ್ನೇ ಹೇಳುತ್ತಿದೆ.

## 16. ತತ್ಸಾಭಾವ್ಯಾಪತ್ತ್ಯಧಿಕರಣ

ಈ ಅಧಿಕರಣದಲ್ಲಿ ದೇವತೆಗಳಿಗೆ ಸಂಪೂರ್ಣ ಅಧೀನನಾದ ಜೀವನು ದೇವತೆಗಳೊಂದಿಗೆ ಐಕ್ಯ ಹೊಂದಲಾರ ಎಂದು ಹೇಳಲಾಗಿದೆ.

ಧೂಮಾದಿಭಾವವೇ ಈ ಅಧಿಕರಣದ ವಿಷಯ. ಧೂಮಾದಿಭಾವವೆಂದರೆ ಧೂಮಾದಿದೇವತೆ-ಗಳೊಂದಿಗೆ ಐಕ್ಯವೋ? ಕರ್ಮವನ್ನು ಆಚರಿಸಿದವನಿಗೆ ಆ ದೇವತಾಸ್ಥಾನದ ಪ್ರಾಪ್ತಿಯೋ ಅಥವಾ ಬೇರೆಯೋ ? ಎಂದು.

'ಧೂಮೋ ಭೂತ್ವಾऽಭ್ರಂ ಭವತಿ' ಮುಂತಾದ ಶ್ರುತಿಗಳಲ್ಲಿ ಕರ್ಮವನ್ನು ಆಚರಿಸಿದವರಿಗೆ ಅದರ ಫಲವಾಗಿ ಧೂಮಾದಿಭಾವವು ಸಿಗುತ್ತದೆ ಎಂದು ಹೇಳಿದೆ. ಧೂಮಾದಿಭಾವವೆಂದರೆ ಕರ್ಮವನ್ನು ಆಚರಿಸಿದವನಿಗೆ ಧೂಮಾದಿದೇವತೆಗಳೊಂದಿಗೆ ಐಕ್ಯ ಬರುತ್ತದೆ. ಅಥವಾ ಆ ದೇವತೆಯ ಪದವಿ-ಪ್ರಾಪ್ತವಾಗುತ್ತದೆ. ಈ ಎರಡರಲ್ಲಿಯೂ ಕಲ್ಪಸಮಾಪ್ತಿಯವರೆಗೂ ಪರಮಸುಖವು ಒಮ್ಮೆ ಯಾಗಾದಿ ಅನುಷ್ಠಾನ ಮಾಡಿದವನಿಗೆ ಪ್ರಾಪ್ತವಾಗುವದರಿಂದ ಕರ್ಮದಲ್ಲಿ ಹಾಗೂ ಫಲದಲ್ಲಿ ವೈರಾಗ್ಯದ ಅಗತ್ಯವಿಲ್ಲ.

ಧೂಮೋ ಭೂತ್ವಾऽಭ್ರಂ ಭವತಿ ಎಂಬಲ್ಲಿ ಶ್ರುತವಾದ ಧೂಮಾದಿ ಭಾವವೆಂದರೆ ದೇವತೆಯೊಂದಿಗೆ ಐಕ್ಯವೂ ಅಲ್ಲ. ಆ ದೇವತಾಪದವಿಯ ಪ್ರಾಪ್ತಿಯೂ ಅಲ್ಲ. ಬೇರೆಯಾಗಿರುವ ಎರಡು ವಸ್ತುಗಳಿಗೆ ಎಂದೂ ಐಕ್ಯ ಕೂಡುವದಿಲ್ಲ. ಆದ್ದರಿಂದ ಐಕ್ಯಪ್ರಾಪ್ತಿ ಇಲ್ಲ. ದೇವತಾಪದವಿಗೆ ಕಾರಣವಾದ ಯೋಗ್ಯತೆ ಇಲ್ಲ ಮತ್ತು ಅಪರೋಕ್ಷಜ್ಞಾನವೂ ಇಲ್ಲ. ದೇವತಾಪದವಿಯ ಪ್ರಾಪ್ತಿಯು ಅದರಿಂದ ಅಸಂಭಾವಿತವೇ. ವಸ್ತುತಃ ಧೂಮಾದಿದೇವತೆ ನಡೆದರೆ ನಡೆಯುವುದು. ಕುಳಿತರೆ ಕುಳಿತುಕೊಳ್ಳುವದು ಹೀಗೆ ಕರ್ಮಿಗಳು ಧೂಮಾದಿದೇವತೆಯ ಸ್ವಭಾವಸದೃಶಸ್ವಭಾವವನ್ನು ಹೊಂದುವರು ಎಂದು ಅಭಿಪ್ರಾಯ. ಹೀಗೆ ಕಾಮ್ಯಕರ್ಮವು ಮಹಾಪುರುಷಾರ್ಥಕ್ಕೆ ಕಾರಣವಲ್ಲವಾದ್ದರಿಂದ ಕಾಮ್ಯಕರ್ಮಗಳಲ್ಲಿ ವೈರಾಗ್ಯವು ಅವಶ್ಯಕವೇ ಆಗಿದೆ.

### 17. ನಾತಿಚಿರೇಣಾಧಿಕರಣ

ಈ ಅಧಿಕರಣದಲ್ಲಿ ಜೀವನು ಒಂದು ವರ್ಷದ ನಂತರ ಪುನಃ ಜನ್ಮವನ್ನು ಪಡೆಯುತ್ತಾನೆ ಎಂದು ಹೇಳಲಾಗಿದೆ. ಕಾಮ್ಯಕರ್ಮಾನುಷ್ಠಾತೃಗಳೇ ವಿಷಯ. ಸ್ವರ್ಗದಿಂದ ಹಿಂತಿರುಗಿದ ಕಾಮ್ಯಕರ್ಮಿಗಳು ಕಾಲಾಂತರದಲ್ಲಿ ಗರ್ಭವಾಸಾದಿಗಳನ್ನು ಅನುಭವಿಸುವರೋ ಅಥವಾ ಶೀಘ್ರದಲ್ಲೇ ಅನುಭವಿಸುವರೋ ಎಂದು ಸಂಶಯ. ಲೋಕದಲ್ಲಿ ಕೆಲವರು ನಿಧಾನವಾಗಿ ಚಲಿಸುವವರು ಮತ್ತೆ ಕೆಲವರು ಶೀಘ್ರವಾಗಿ ಚಲಿಸುವವರು ಹೀಗೆ ಎರಡು ವಿಧವಾಗಿ ಕಂಡಿದ್ದಾರೆ. ಇದೇ ಸಂಶಯಕ್ಕೆ ಕಾರಣ.

ಸ್ವರ್ಗದಿಂದ ಹಿಂತೆರಳುವ ಕಾಮ್ಯಕರ್ಮಾನುಷ್ಠಾತೃವಿಗೆ ಕಾಲದ ನಿಯಮವಿಲ್ಲದಿರುವುದರಿಂದ ಮತ್ತು ಯಥೇತಮಾಕಾಶಮ್ ಮುಂತಾದ ಶ್ರುತಿಗಳಲ್ಲಿ ಅನೇಕಸ್ಥಾನಗಳ ಪ್ರಾಪ್ತಿಯು ಮಧ್ಯದಲ್ಲಿದೆ ಎಂದು ಶ್ರುತವಾಗಿರುವದರಿಂದ ಕಲ್ಪಾಂತ್ಯದವರೆಗೂ ಧೂಮಾದಿದೇವತಾಸ್ವಭಾವಪ್ರಾಪ್ತಿಯಿಂದ ಸುಖಾನುಭವ ದೊರಕುವಾಗ ಅದನ್ನು ಪರಿತ್ಯಜಿಸಲು ಕಾರಣವಿಲ್ಲ. ಆದ್ದರಿಂದ ಕಾಮ್ಯಕರ್ಮದಲ್ಲಿ ವೈರಾಗ್ಯದ ಅವಶ್ಯಕತೆ ಇಲ್ಲ ಎಂದು ಪೂರ್ವಪಕ್ಷ.

ಕಾಮ್ಯಕರ್ಮದ ಫಲವು ಕಾಲದ ಪರಿಮಿತಿಗೆ ಒಳಪಟ್ಟಿದೆ. 'ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯಂತೇ' ಮುಂತಾದ ಶ್ರುತಿಗಳಲ್ಲಿ

'ಸ್ವರ್ಗಾಲ್ಲೋಕಾದವಾಪ್ನೋತಿ ವತ್ಸರಾತ್ ಪೂರ್ವಮೇವ ತು' ಇತ್ಯಾದಿಸ್ಮೃತಿಗಳಲ್ಲಿ ಒಂದು ವರ್ಷದ ಮೊದಲೇ ಬೇರೆ ಜನ್ಮವನ್ನು ಹೊಂದುತ್ತಾನೆಂದು ಹೇಳಲ್ಪಟ್ಟಿದೆ. ಹೀಗೆ ಕಾಲಕ್ಲೃಪ್ತವಾಗಿರುವದರಿಂದ ಹೆಚ್ಚು ಕಾಲ ಧೂಮಾದಿದೇವತಾಲೋಕದಲ್ಲಿ ವಾಸಮಾಡಲು ಕಾರಣವಿಲ್ಲ. ಆದಕಾರಣ ಶೀಘ್ರದಲ್ಲಿಯೇ ಗರ್ಭವಾಸಾದಿದುಃಖಗಳು ಸಂಭವಿಸುವದರಿಂದ ಕಾಮ್ಯಕರ್ಮಾದಿಗಳಲ್ಲಿ ವಿರಕ್ತಿಯು ಅವಶ್ಯಕವಾಗಿದೆ.

## 18. ಅನ್ಯಾಧಿಕರಣ

ಈ ಅಧಿಕರಣದಲ್ಲಿ ಒಟ್ಟು ಎರಡು ಸೂತ್ರಗಳಿವೆ.

**ಓಂ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ಓಂ**

**ಓಂ ಅಶುದ್ಧಮಿತಿ ಚೇನ್ನ ಶಬ್ದಾತ್ ಓಂ**

ಕರ್ಮಾನುಷ್ಠಾತೃಗಳೇ ಈ ಅಧಿಕರಣದ ವಿಷಯ. ಆಗಮನದಲ್ಲಿ ದುಃಖವುಳ್ಳವರೋ ಅಥವಾ ಅಲ್ಲವೋ ಎಂದು ಸಂಶಯ. ಗ್ರಾಮಗಮನವು ಲೋಕದಲ್ಲಿ ದುಃಖವುಳ್ಳದ್ದಾಗಿದೆ ಆದರೆ ಇದು ಪುರುಷಾರ್ಥವಾಗಿದೆ. ಆದ್ದರಿಂದ ಈ ಸಂಶಯ.

'ತ ಇಹ ವ್ರೀಹಿಯವಾಃ ಓಷಧಿವನಸ್ಪತಯೋ ಜಾಯಂತೇ' ಮುಂತಾದ ಶ್ರುತಿಗಳಿಂದ ಕರ್ಮಾನುಷ್ಠಾತೃಗಳಿಗೆ ವ್ರೀಹ್ಯಾದಿಭಾವವು ಪ್ರತೀತವಾಗಿದೆ. ವ್ರೀಹ್ಯಾದಿಗಳ ಛೇದನದಿಂದ ಉಂಟಾಗುವ ದುಃಖವು ವ್ರೀಹ್ಯಾದಿಜೀವರಿಗೆ ಹೇಗೋ ಹಾಗೆ ಕರ್ಮಿಗೂ ಸಹ ಆಗುತ್ತದೆ. ಏಕೆಂದರೆ ಇಬ್ಬರಿಗೂ ಒಂದೇ ವ್ರೀಹ್ಯಾದಿಶರೀರದಲ್ಲಿ ಸಹಭಾವ ಕಂಡಿದೆ. ಆಗಮನಾದಿಗಳು ಯಜ್ಞದ ಫಲವಾದ್ದರಿಂದ ದುಃಖವೂ ಯಜ್ಞದ ಫಲ. ಸುಖಸಾಧನವೆಂದು ವೇದದಲ್ಲಿ ಹೇಳಿದ ಕರ್ಮವು ಹೀಗೆ ದುಃಖಸಾಧನವಾದ್ದರಿಂದ ವೇದದ ಬಗ್ಗೆ ಅನಾಶ್ವಾಸಪ್ರಸಂಗವು ಉಂಟಾಗುತ್ತದೆ. ಅದರಂತೆ ವೈರಾಗ್ಯವಿಧಾಯಕವಾಕ್ಯಗಳ ವಿಷಯದಲ್ಲಿಯೂ ಅನಾಶ್ವಾಸಪ್ರಸಂಗವು ಉಂಟಾಗುವ ಪ್ರಯುಕ್ತ ವೈರಾಗ್ಯವು ಅನುಷ್ಠಾನಾರ್ಹವಲ್ಲ ಎಂದು ಪೂರ್ವಪಕ್ಷ.

'ತ ಇಹ ವ್ರೀಹಿಯವಾಃ ಓಷಧಿವನಸ್ಪತಯಸ್ತಿಲಾ ಮಾಷಾ ಇತಿ ಜಾಯಂತೇ' ಎಂಬ ಶ್ರುತಿಯು ಕೇವಲ ವ್ರೀಹ್ಯಾದಿಶರೀರಪ್ರವೇಶವನ್ನು ಹೇಳುತ್ತದೆ ಅಭಿಮಾನವನ್ನಲ್ಲ. ಈ ವಿಷಯದಲ್ಲಿ 'ಸೋಽವಾಗ್ಗತಃ ಸ್ಥಾವರಾನ್ ಪ್ರವಿಶ್ಯಾಭೋಗೇನೈವ ವ್ರಜನ್' ಎಂಬ ಸಮಾಖ್ಯಾಶ್ರುತಿಯೂ ಇದೆ. ದುಃಖಪ್ರಾಪ್ತಿಗೆ ಕಾರಣವಾದದ್ದು ಪಾಪ. ಹೊರತಾಗಿ ಸಹಾವಸ್ಥಾನವಲ್ಲ. ಪಾಪಫಲಾನುಭವಕ್ಕೆ ಸಮಯವಲ್ಲದಿರುವುದರಿಂದ ದುಃಖವೂ ಇಲ್ಲ. ಆದ್ದರಿಂದ ಯಜ್ಞಾದಿಕರ್ಮವು ದುಃಖಸಾಧನವಲ್ಲ. ಹೀಗೆ ವೇದದಲ್ಲಿ ಅನಾಶ್ವಾಸಪ್ರಸಂಗವಿಲ್ಲದಿರುವದರಿಂದ ಶ್ರುತಿಬೋಧ್ಯವಾದ ವೈರಾಗ್ಯವು ಅವಶ್ಯಕವಾಗಿದೆ.

## 19. ರೇತೋಽಧಿಕರಣ

ಈ ಅಧಿಕರಣದಲ್ಲಿ ಜೀವನು ಮೊದಲು ತಂದೆಯ ಶರೀರವನ್ನು ಪ್ರವೇಶಿಸಿ ನಂತರ ತಾಯಿಯ ಗರ್ಭವನ್ನು ಪ್ರವೇಶಿಸುತ್ತಾನೆ ಎಂಬ ವಿಷಯವನ್ನು ನಿರೂಪಿಸಲಾಗಿದೆ.

**ಓಂ ರೇತಃ ಸಿಗ್ಯೋಗೋಽಥ ಓಂ**

ಕಾಮ್ಯಕರ್ಮಿಯೇ ವಿಷಯ. ತಂದೆಯನ್ನು ಪ್ರವೇಶಿಸುತ್ತಾನೋ ಅಥವಾ ಇಲ್ಲವೋ ಎಂದು ಸಂಶಯ. 'ಯೋ ವಾ ರೇತಸ್ಸಿಂಚತಿ ತಮೇವಾನುವಿಶತಿ' ಎಂದು ಶ್ರುತಿಯು ರೇತಸ್ಸೇಚನ ಮಾಡು-ವವರನ್ನು ಜೀವನು ಪ್ರವೇಶಿಸುತ್ತಾನೆ ಎಂದು ಹೇಳುತ್ತಿದೆ. ಆದರೆ ತಂದೆಯ ಪ್ರವೇಶದಿಂದ ಪ್ರಯೋಜನವಿಲ್ಲ. ಇದೇ ಸಂಶಯಕ್ಕೆ ಕಾರಣ.

ಇಲ್ಲಿ ಪೂರ್ವಪಕ್ಷ ಹೀಗಿದೆ. 'ಸ್ವರ್ಗಾದವಾಗ್ಗತಶ್ಚಾಪಿ ಮಾತುರೇವೋದರಂ ವ್ರಜೇತ್' ಎಂಬ ಶ್ರುತಿಯು ತಾಯಿಯಲ್ಲಿ ರೇತಸ್ಸೇಚನ ಮಾಡುವವರನ್ನು ಜೀವನು ಪ್ರವೇಶಿಸುತ್ತಾನೆ ಎಂದು ಹೇಳುತ್ತಿದೆ. ಆದರೆ ತಂದೆಯ ಪ್ರವೇಶದಿಂದ ಪ್ರಯೋಜನವಿಲ್ಲ. ಇದೇ ಸಂಶಯಕ್ಕೆ ಕಾರಣ.

'ಸ್ವರ್ಗಾದವಾಗ್ಗತಶ್ಚಾಪಿ ಮಾತುರೇವೋದರಂ ವ್ರಜೇತ್' ಎಂಬ ಶ್ರುತಿಯು ತಾಯಿಯಲ್ಲಿ ಪ್ರವೇಶವನ್ನು ಜೀವಿಗೆ ಹೇಳುತ್ತದೆ. ಏವಕಾರದಿಂದ ಪಿತೃವಿನಲ್ಲಿ ಪ್ರವೇಶವನ್ನು ನಿಷೇಧಿಸುತ್ತಿದೆ. ಮತ್ತು ಪಿತೃವಿನಲ್ಲಿ ಪ್ರವೇಶದಿಂದ ಪ್ರಯೋಜನವಿಲ್ಲ. ಆದ್ದರಿಂದ 'ಯೋ ವಾ ರೇತಸ್ಸಿಂಚತಿ' ಎಂಬ ಶ್ರುತಿಯು ಕಾಕುಸ್ವರದಿಂದ ಪಿತೃಪ್ರವೇಶವನ್ನು ನಿಷೇಧಿಸುತ್ತದೆ ಎನ್ನುವದು ಯುಕ್ತ. ಹೀಗೆ ಜೀವನಿಗೆ ಪಿತೃವಿನಲ್ಲಿ ಪ್ರವೇಶವಿಲ್ಲದಿರುವದರಿಂದ ಸ್ವರ್ಗದಿಂದ ಹಿಂತೆರಳುವುದರಲ್ಲಿ ಆಯಾಸವಿಲ್ಲ. ಆದಕಾರಣ ಕರ್ಮಾದಿ-ಗಳಲ್ಲಿ ವೈರಾಗ್ಯದ ಅಗತ್ಯವಿಲ್ಲ ಎಂದು ಪೂರ್ವಪಕ್ಷ.

'ತತೋ ರೇತಸ್ಸಿಚಮೇವಾನುಪ್ರವಿಶತ್ಯಥ ಮಾತರಮ್' ಎಂಬ ಶ್ರುತಿಯು ಮೊದಲು ಪಿತೃವಿನಲ್ಲಿ ನಂತರ ಮಾತೃವಿನಲ್ಲಿ ಪ್ರವೇಶವನ್ನು ಹೇಳಿದೆ. ಆದ್ದರಿಂದ ಕರ್ಮಿಗೆ ಪಿತೃಪ್ರವೇಶವನ್ನು ಒಪ್ಪಲೇಬೇಕು. ಶರೀರಪರಿಣಾಮಕ್ಕಾಗಿ ರೇತಸ್ಸಿನ ಅಪೇಕ್ಷೆ ಇರುವದರಿಂದ ಭಗವಂತನು ಮಾಡಿರುವ ನಿಯಮಕ್ಕನು-ಗುಣವಾಗಿ ಜೀವನು ತಂದೆಯನ್ನು ಪ್ರವೇಶಿಸಲೇಬೇಕು. ಆದ್ದರಿಂದ ಜೀವನಿಗೆ ಆಗಮನವು ಆಯಾಸಕರವಾದ್ದರಿಂದ ವೈರಾಗ್ಯವು ಆವಶ್ಯಕವಾಗಿದೆ.

## 20. ಯೋನ್ಯಧಿಕರಣ

ಈ ಅಧಿಕರಣದಲ್ಲಿ ಜೀವನು ಮಾತೃಗರ್ಭದಲ್ಲಿ ಶರೀರಹೊಂದುವ ಕ್ರಮವನ್ನು ನಿರೂಪಣೆ ಮಾಡಲಾಗಿದೆ.

**ಓಂ ಯೋನೇಃ ಶರೀರಮ್ ಓಂ**

ಜೀವನೇ ಅಧಿಕರಣದ ವಿಷಯ. ಜೀವನು ತಂದೆಯ ಮೂಲಕ ಮಾತೃಯೋನಿಯನ್ನು ಪ್ರವೇಶಿಸಿ ಶರೀರವನ್ನು ಹೊಂದುತ್ತಾನೋ ಅಥವಾ ಇಲ್ಲವೋ ಎಂದು ಸಂಶಯ. ಎರಡು ಪಕ್ಷಗಳಲ್ಲಿಯೂ ಅನುಪಪತ್ತಿ ಇರುವುದೇ ಸಂಶಯಕ್ಕೆ ಕಾರಣ.

'ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ ಸ್ವರ್ಗತೋ ಗತಃ' ಈ ವಚನದಂತೆ ಕಲಲಬುದ್ಬುದಾದಿ-ಕ್ರಮದಿಂದ ದೇಹಪ್ರಾಪ್ತಿ ಇಲ್ಲ. ಪುಣ್ಯವಂತರು ಯೋನಿಪ್ರವೇಶವಿಲ್ಲದೇ ತಂದೆಯ ಸ್ಪರ್ಶದಿಂದಲೇ ತಾಯಿಯನ್ನು ಪ್ರವೇಶಿಸಿ ದೇಹವನ್ನು ಹೊಂದುತ್ತಾರೆ. ಅತಿಶಯಪುಣ್ಯವನ್ನು ಹೊಂದಿರುವವನು

ನೇರವಾಗಿ ತಾಯಿಯನ್ನು ಅನ್ನಾದಿಗಳ ಮೂಲಕ ಪ್ರವೇಶಿಸಿ ದೇಹವನ್ನು ಪಡೆಯುವನು. ಅಥವಾ ಸಿದ್ಧವಾದ ಶರೀರವನ್ನು ಪ್ರವೇಶಿಸುವನು. ಹೀಗೆ ಸ್ವರ್ಗದಿಂದ ಹಿಂತಿರುಗಿದವನಿಗೆ ಪಾಪಿ ಜೀವನಂತೆ ಯೋನಿಯ ಮೂಲಕ ತಾಯಿಯ ಶರೀರವನ್ನು ಹೊಂದಿ ಕಲಲಬುದ್ಬುದಾದಿಕ್ರಮದಿಂದ ದೇಹಪ್ರಾಪ್ತಿಯ ನಿಯಮವಿಲ್ಲದಿರುವದರಿಂದ ಆಗಮನದಲ್ಲಿ ಆಯಾಸವಿಲ್ಲದಿರುವ ಕಾರಣ ವೈರಾಗ್ಯದ ಅವಶ್ಯಕತೆ ಇಲ್ಲ.

ಸ್ವರ್ಗದಿಂದ ಹಿಂತಿರುಗಿದವನಿಗೂ ಪಿತೃಪ್ರವೇಶ, ಯೋನಿಯ ಮೂಲಕ ತಾಯಿಯ ಪ್ರವೇಶ ನಂತರ ಕಲಲಬುದ್ಬುದಾದಿಕ್ರಮದಿಂದ ದೇಹಪ್ರಾಪ್ತಿಯ ನಿಯಮವು ಇದ್ದೇ ಇದೆ. 'ದಿವಃ ಸ್ಥಾನ್ನ್ ಗಚ್ಛತಿ' ಮುಂತಾದ ವಾಕ್ಯಗಳೇ ಈ ವಿಷಯದಲ್ಲಿ ಪ್ರಮಾಣ. 'ದೇಹಂ ಗರ್ಭಸ್ಥಿತಂ ಕ್ವಾಪಿ ಪ್ರವಿಶೇತ್ ಸ್ವರ್ಗತೋ ಗತಃ' ಎಂದು ನೇರಪ್ರವೇಶವನ್ನು ಹೇಳಿರುವುದು ಎಲ್ಲ ಜೀವರಿಗೂ ಅಲ್ಲ. ಭಗವಂತನ ವಿಶೇಷ ಅನುಗ್ರಹಕ್ಕೆ ಪಾತ್ರರಾದ ದೃಷ್ಟದ್ಯುಮ್ನಾದಿಗಳಿಗೆ ಮಾತ್ರ. ಆದ್ದರಿಂದ ಆಗಮನವು ಸಾಮಾನ್ಯರಾದ ಎಲ್ಲ ಜೀವರಿಗೂ ದುಃಖಯುಕ್ತವೇ ಆಗಿದೆ. ಆದಕಾರಣ ವೈರಾಗ್ಯಪೂರ್ವಕವಾಗಿ ಭಗವಂತನ ಭಜನೆಯು ಆವಶ್ಯಕವೇ ಆಗಿದೆ.

**ಇಲ್ಲಿಗೆ ತೃತೀಯಾಧ್ಯಾಯದ ಪ್ರಥಮಪಾದವು ಮುಗಿಯಿತು.**

## ತೃತೀಯಾಧ್ಯಾಯ ದ್ವಿತೀಯಪಾದ

ತೃತೀಯಾಧ್ಯಾಯದ ದ್ವಿತೀಯಪಾದದಲ್ಲಿ ಒಟ್ಟು ಇಪ್ಪತ್ತು ಅಧಿಕರಣಗಳು.

1. ಸಂಧ್ಯಾಧಿಕರಣ
2. ಪರಾಭಿಧ್ಯಾನಾಧಿಕರಣ
3. ದೇಹಯೋಗಾಧಿಕರಣ
4. ತದಭಾವಾಧಿಕರಣ
5. ಅತಃ ಪ್ರಬೋಧಾಧಿಕರಣ
6. ಕರ್ಮಾನುಸ್ಮೃತ್ಯಧಿಕರಣ
7. ಮುಗ್ಧಾಧಿಕರಣ
8. ಸ್ಥಾನತೋಽಭೇದಾಧಿಕರಣ
9. ಅರೂಪವದಧಿಕರಣ
10. ಉಪಮಾಧಿಕರಣ
11. ಅಂಬುವದಧಿಕರಣ
12. ವೃದ್ಧಿಹ್ರಾಸಾಧಿಕರಣ
13. ಪಾಲಕತ್ವಾಧಿಕರಣ
14. ಅವ್ಯಕ್ತಾಧಿಕರಣ
15. ಅಹಿಕುಂಡಲಾಧಿಕರಣ
16. ಪರಮತೋಽಧಿಕರಣ
17. ಸ್ಥಾನವಿಶೇಷಾಧಿಕರಣ
18. ಪ್ರತಿಷೇಧಾಧಿಕರಣ
19. ಸರ್ವಗತತ್ವಾಧಿಕರಣ
20. ಫಲಾಧಿಕರಣ

## 1. ಸಂಧ್ಯಾಧಿಕರಣ

ತೃತೀಯಾಧ್ಯಾಯದ ದ್ವಿತೀಯಪಾದದಲ್ಲಿ ಇರುವ ಇಪ್ಪತ್ತು ಅಧಿಕರಣಗಳಲ್ಲಿ ಮೊದಲನೆಯ ಅಧಿಕರಣ ಸಂಧ್ಯಾಧಿಕರಣ. ಈ ಅಧಿಕರಣದಲ್ಲಿ ಸತ್ಯವಾದ ಸ್ವಾಪ್ನಪದಾರ್ಥಸೃಷ್ಟಿಯು ಭಗವಂತನಿಂದಲೇ ಆಗುತ್ತದೆ ಎಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ಒಟ್ಟು ನಾಲ್ಕು ಸೂತ್ರಗಳು.

**ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ**

**ಓಂ ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ಓಂ**

**ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ಓಂ**

**ಓಂ ಸೂಚಕಶ್ಚ ಹಿ ಶ್ರುತೇರಾಚಕ್ಷತೇ ತದ್ವಿದಃ ಓಂ**

ಸ್ವಪ್ನವೇ ಈ ಅಧಿಕರಣದ ವಿಷಯ. ಸ್ವಪ್ನವು ಭಗವದಧೀನವೋ ಅಲ್ಲವೋ ಎಂದು ಸಂಶಯ.

ಸ್ವಾಪ್ನಪದಾರ್ಥಗಳು ಈಶ್ವರಾಧೀನವಲ್ಲ. ಕಾರಣ ಸ್ವಾಪ್ನಾವಸ್ಥೆಯ ಪೂರ್ವದಲ್ಲಿ ಅಥವಾ ಅನಂತರಕಾಲದಲ್ಲಿ ಅವುಗಳ ಉಪಲಬ್ಧಿ ಇಲ್ಲದಿರುವದರಿಂದ ಅವುಗಳು ಸತ್ಯವಲ್ಲ. ಸತ್ಯವಲ್ಲದ ಆ ಸ್ವಪ್ನಗಳು ಭಗವದಧೀನವಾಗುವದಾದರೂ ಹೇಗೆ ? ಎಂದು ಪೂರ್ವಪಕ್ಷ.

ಸ್ವಾಪ್ನಪದಾರ್ಥಗಳು ಸತ್ಯವೇ ಆಗಿವೆ. ಸ್ವಾಪ್ನಕಾಲದಲ್ಲಿಯೇ ಭಗವಂತನಿಂದ ಒಂದು ಕ್ಷಣದಲ್ಲಿ ಅವುಗಳ ಸೃಷ್ಟಿ ಸ್ಥಿತಿ ಆಗಲೇ ಅವುಗಳ ನಾಶವೂ ಕೂಡ. 'ರಥಾನ್ ರಥಯೋಗಾನ್ ಪಥಃ ಸೃಜತೇ' ಮುಂತಾದ ಶ್ರುತಿಗಳೇ ಈ ವಿಷಯದಲ್ಲಿ ಪ್ರಮಾಣಗಳಾಗಿವೆ. ಹೀಗೆ ಸ್ವಾಪ್ನಪದಾರ್ಥಗಳು ಭಗವಂತನ ಅಧೀನವೇ ಆಗಿವೆ. ಇದು ಅಘಟಿತಘಟನಾಶಕ್ತಿಯುಳ್ಳ ಭಗವಂತನ ಮಾಹಾತ್ಮ್ಯವಾದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವೇ ಆಗಿದೆ.

## 2. ಪರಾಭಿಧ್ಯಾನಾಧಿಕರಣ

ಈ ಅಧಿಕರಣದಲ್ಲಿ ಸ್ವಾಪ್ನಪದಾರ್ಥಗಳ ತಿರೋಧಾನವೂ ಭಗವದಧೀನವೇ ಆಗಿದೆ ಎಂದು ಹೇಳಲಾಗಿದೆ. ಇದು ಏಕಸೂತ್ರಾಧಿಕರಣ.

**ಓಂ ಪರಾಭಿಧ್ಯಾನಾತ್ ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ಓಂ**

ಸ್ವಪ್ನದ ತಿರೋಭಾವವೇ ಈ ಅಧಿಕರಣದ ವಿಷಯ. ತಿರೋಭಾವವು ಭಗವಧೀನವೋ ಅಥವಾ ಅಲ್ಲವೋ ಎಂದು ಸಂಶಯ. ಸರ್ವವೂ ಈಶ್ವರಾಧೀನವೆಂದು ಶ್ರುತಿಯಲ್ಲಿ ಹೇಳಿರುವದು ಸ್ವಪ್ನದ ಬಗ್ಗೆ ವಿಶೇಷ ಹೇಳದಿರುವದು ಸಂಶಯಕ್ಕೆ ಕಾರಣ.

ಬಾಹ್ಯಪದಾರ್ಥಗಳ ಅಜ್ಞಾನದಿಂದ ಸ್ವಪ್ನವು ತೋರುತ್ತದೆ. ಆದ ಕಾರಣ ಜ್ಞಾನಶಕ್ತಿಯಿಂದಲೇ ಅಜ್ಞಾನಪರಿಹಾರವಾದಾಗ ಸ್ವಪ್ನತಿರೋಭಾವವು ಸಂಭವಿಸುತ್ತದೆ. ಭಗವಂತನ ಶಕ್ತಿಯಿಂದ ಅಲ್ಲ. ಆದ್ದರಿಂದ ಸ್ವಪ್ನವು ಈಶ್ವರಾಧೀನ ಅಲ್ಲ. ಈಶ್ವರಾಧೀನವಲ್ಲದ ಸ್ವಪ್ನವನ್ನು ಭಗವದಧೀನ ಎಂದು ಹೇಳುವದೂ ಬೇಕಿಲ್ಲ ಎಂದು ಪೂರ್ವಪಕ್ಷ.

ಜ್ಞಾನಾಜ್ಞಾನಗಳು ಜಡವಾದ್ದರಿಂದ ಅವುಗಳಿಗೆ ಸ್ವಾತಂತ್ರ್ಯವು ಇಲ್ಲ. ಯಾವ ಕಾರಣದಿಂದ ಬಂಧ-ಮೋಕ್ಷಗಳು ಪರಮಾತ್ಮನಿಂದಲೇ ಆಗುತ್ತವೆಯೋ ಆ ಆ ಕಾರಣದಿಂದ ಸ್ವಾಪ್ನಪದಾರ್ಥಗಳ ಆವಿರ್ಭಾವ-ತಿರೋಭಾವಗಳು ಬಾಹ್ಯಪದಾರ್ಥದ ಅಜ್ಞಾನ-ಜ್ಞಾನ ನಿಮಿತ್ತವಾದರೂ ಈಶ್ವರಾಧೀನಗಳೇ ಆಗಿವೆ. ಇದಕ್ಕೆ 'ಸ್ವಪ್ನಾದಿಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ' ಎಂಬ ಪ್ರಮಾಣವೂ ಇದೆ. ಆದ್ದರಿಂದ ಭಗವಂತನಲ್ಲಿ ಭಕ್ತಿಯು ಯುಕ್ತವೇ ಆಗಿದೆ.

## 3. ದೇಹಯೋಗಾಧಿಕರಣ

ಈ ಅಧಿಕರಣದಲ್ಲಿ ಜಾಗ್ರದವಸ್ಥೆಯೂ ಈಶ್ವರಾಧೀನವೇ ಆಗಿದೆ ಎಂದು ಹೇಳಲಾಗಿದೆ.

**ಓಂ ದೇಹಯೋಗಾದ್ವಾಸೋಽಪಿ ಓಂ**

ಇಲ್ಲಿ ಜಾಗ್ರದವಸ್ಥೆಯು ವಿಷಯ. ಅದು ಈಶ್ವರಾಧೀನವೋ ಅಲ್ಲವೋ ಎಂದು ಸಂಶಯ. ವಿಶೇಷವನ್ನು ಹೇಳದಿರುವುದೇ ಸಂಶಯಕ್ಕೆ ಕಾರಣ.

ಜಾಗ್ರದವಸ್ಥೆಯು ಕಾಲಾಧೀನ ಎಂದು ಅನುಭವ ಸಿದ್ಧವಾಗಿದೆ. ಆದಕಾರಣ ಅದು ಈಶ್ವರಾಧೀನವಲ್ಲ. ಆದ್ದರಿಂದ ಈಶ್ವರನು ಮಹಾಮಹಿಮನಲ್ಲ ಎಂದು ಪೂರ್ವಪಕ್ಷ.

'ಸ ಏವ ಜಾಗರಿತೇ ಸ್ಥಾಪಯತಿ' ಮುಂತಾದ ಶ್ರುತಿಗಳು ಈಶ್ವರನೇ ಜಾಗ್ರದವಸ್ಥಾಪ್ರೇರಕ ಎಂದು ಹೇಳುತ್ತವೆ. ಕಾಲವು ಅಚೇತನವಾದ್ದರಿಂದ ಅದು ಅಸ್ವತಂತ್ರವಾದ ಕಾರಣ ಜಾಗ್ರದವಸ್ಥೆಯು ಕಾಲದ ಅಧೀನವಾಗದೆ ಈಶ್ವರಾಧೀನವೇ ಆಗಿದೆ.

## 4. ತದಭಾವಾಧಿಕರಣ

ಈ ಅಧಿಕರಣದಲ್ಲಿ ನಾಡಿಯಲ್ಲಿರುವ ಪ್ರಾಜ್ಞನ ಆಲಿಂಗನವೇ ಸುಷುಪ್ತಿ ಎಂದು ಹೇಳಲಾಗಿದೆ.

**ಓಂ ತದಭಾವೋ ನಾಡಿಷು ತಚ್ಛ್ರುತೇರಾತ್ಮನಿ ಹಿ ಓಂ**

ಸುಷುಪ್ತಿಯೇ ಈ ಅಧಿಕರಣದ ವಿಷಯ. ಜೀವನ ಸ್ವಾಪವು ನಾಡಿಯಲ್ಲಿಯೋ ಅಥವಾ ಪರಮಾತ್ಮನಲ್ಲಿಯೋ ಎಂದು ಸಂಶಯ. 'ಸತಾ ಸೌಮ್ಯ ತದಾ ಸಂಪನ್ನೋ ಭವತಿ ಯತ್ರೈತತ್ ಸುಪ್ತಃ ಸಮಸ್ತಃ ಸಂಪ್ರಸನ್ನಃ ಸ್ವಪ್ನಂ ನ ವಿಜಾನಾತ್ಯಾಸು ನಾಡೀಷು ಸುಪ್ತೋ ಭವತಿ' ಈ ಎರಡು ಶ್ರುತಿಗಳು ಸಂಶಯಕ್ಕೆ ಕಾರಣ.

ಜಾಗ್ರತ್ ಸ್ವಪ್ನಾವಸ್ಥೆಗಳಲ್ಲಿ ಜೀವನು ಪರಮಾತ್ಮನಿಂದ ಬೇರೆಯಾದ ಸ್ಥಳದಲ್ಲಿ ಇದ್ದು ದುಃಖವನ್ನು ಅನುಭವಿಸುತ್ತಾನೆ. ಸುಷುಪ್ತ್ಯವಸ್ಥೆಯಲ್ಲಿ ದುಃಖವಿಲ್ಲದಿರುವದರಿಂದ ಪರಮಾತ್ಮನಲ್ಲಿಯೇ ಪ್ರವೇಶಿಸಿರುತ್ತಾನೆ ಎಂದು ಹೇಳಬೇಕು. ಆಗ 'ನಾಡೀಷು ಸುಪ್ತೋ ಭವತಿ' ಎಂಬ ವಾಕ್ಯಕ್ಕೆ ನಾಡಿಯಲ್ಲಿರುವ ಪರಮಾತ್ಮನಲ್ಲಿ ಸುಪ್ತಿ ಎಂದು ಅಭಿಪ್ರಾಯ. ಹೀಗೆ ಹೇಳಿದಾಗ 'ಸತಾ ಸೌಮ್ಯ ತದಾ ಸಂಪನ್ನೋ ಭವತಿ' ಪರಮಾತ್ಮನಲ್ಲಿ ಸುಷುಪ್ತಿ ಎನ್ನುವ ವಾಕ್ಯವು ಸರಿ ಹೊಂದುತ್ತದೆ. ಈ ಶ್ರುತಿವಾಕ್ಯಗಳಿಗೆ ವಿರೋಧವಿಲ್ಲದಿರುವ ಕಾರಣ ಯಾವುದೂ ಅಪ್ರಮಾಣವಲ್ಲ. ಆದ್ದರಿಂದ ಅವನಲ್ಲಿ ಭಕ್ತಿಯೂ ಸಮಂಜಸವೇ ಆಗಿದೆ.

## 5. ಅತಃ ಪ್ರಬೋಧಾಧಿಕರಣ

ಈ ಅಧಿಕರಣದಲ್ಲಿ ಮಲಗಿದ ಜೀವನನ್ನು ಭಗವಂತನೇ ಎಬ್ಬಿಸುತ್ತಾನೆ ಎಂದು ಹೇಳಲಾಗಿದೆ.

**ಓಂ ಅತಃ ಪ್ರಬೋಧೋಽಸ್ಮಾತ್ ಓಂ**

ಸುಷುಪ್ತಿಯಿಂದ ಪ್ರಬೋಧವು ಈ ಅಧಿಕರಣದ ವಿಷಯ. ಅದು ಭಗವದಧೀನವೋ ಅಥವಾ ಅಲ್ಲವೋ ಎಂದು ಸಂಶಯ. ಎಲ್ಲವೂ ಭಗವಂತನ ಅಧೀನವೆಂದು ಹೇಳಿ ವಿಶೇಷವನ್ನು ಹೇಳದಿರುವುದು ಸಂಶಯಕ್ಕೆ ಕಾರಣ.

ಸುಪ್ತಿಪ್ರಬೋಧವು ಕೇವಲ ಈಶ್ವರಾಧೀನವಲ್ಲ. ಭೇರೀತಾಡನಾದಿ ಬೇರೆ ಬೇರೆ ಕಾರಣಗಳಿಂದ ಈ ಸುಪ್ತಿಪ್ರಬೋಧ ಉಂಟಾಗಲು ಈಶ್ವರನಿಂದ ಉಂಟಾಗುತ್ತದೆ ಎಂಬ ವಿಷಯದಲ್ಲಿ ಆಧಾರವಿಲ್ಲ. ಕೆಲವೊಮ್ಮೆ ಅಕಸ್ಮಾತ್ ಪ್ರಬೋಧವೂ ಆಗುತ್ತದೆ. ಆದ್ದರಿಂದ ಭಗವಂತನು ಕಾರಣನಲ್ಲ.

ಸುಪ್ತಿಪ್ರಬೋಧವು ಈಶ್ವರನಿಂದಲೇ ಆಗುತ್ತದೆ. 'ನ ಋತೇ ತ್ವತ್ ಕ್ರಿಯತೇ ಕಿಂಚನಾರೇ' ಈಶ್ವರನ ಹೊರತಾಗಿ ಏನೂ ನಡೆಯುವದಿಲ್ಲ ಎಂದು ಶ್ರುತಿಯೂ ಇರುವದರಿಂದ ಈಶ್ವರನೇ ಕಾರಣ. ಭೇರೀತಾಡನಾದಿಗಳು ಕೇವಲ ನಿಮಿತ್ತ ಮಾತ್ರ ಎಂದು ತಿಳಿಯುತ್ತದೆ.

## 6. ಕರ್ಮಾನುಸ್ಮೃತ್ಯಧಿಕರಣ

ಈ ಅಧಿಕರಣದಲ್ಲಿ ಸರ್ವಾವಸ್ಥಾಪ್ರೇರಕನು ಭಗವಂತನೇ ಆಗಿದ್ದಾನೆ ಎಂದು ಹೇಳಲಾಗಿದೆ.

**ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಶ್ಚ ಓಂ**

ಪ್ರಕೃತವಾದ ಸ್ವಪ್ನಾದಿ ಅವಸ್ಥೆಗಳೇ ವಿಷಯ. ಎಲ್ಲ ಜೀವರ ಸಾರ್ವಕಾಲೀನ ಅವಸ್ಥೆಗಳೂ ಭಗವಂತನ ಅಧೀನವೋ ? ಅಥವಾ ಕೆಲವು ಜೀವರ ಕೆಲವು ಕಾಲದ ಅವಸ್ಥೆಗಳು ಭಗವದಧೀನವೋ ? ಎಂದು ಸಂಶಯ. 'ಸ್ವಪ್ನಾದಿ ಬುದ್ಧಿಕರ್ತಾ ಚ ತಿರಸ್ಕರ್ತಾ ಸ ಏವ ಚ' 'ಸ ಏವ ಜಾಗರಿತೇ ಸ್ಥಾಪಯತಿ' ಮುಂತಾದ ವಾಕ್ಯಗಳಲ್ಲಿ ಎಲ್ಲ ಜೀವರಿಗೂ ಎಲ್ಲ ಕಾಲಕ್ಕೂ ಸಂಬಂಧಿಸಿ ಎಂಬ ಶಬ್ದಗಳಿಲ್ಲದಿರುವುದು ಸಂದೇಹಕ್ಕೆ ಕಾರಣ.

ಭಗವಂತನು ಸರ್ವಜೀವರ ಸಾರ್ವಕಾಲೀನ, ಸಾರ್ವದೇಶಿಕ, ಸರ್ವಾವಸ್ಥಾ ಪ್ರೇರಕನಲ್ಲ. ರಾಜರು ಎಲ್ಲ ದೇಶಗಳಿಗೂ ಎಲ್ಲ ಕಾಲದಲ್ಲೂ ಅಧಿಪತಿಗಳಾಗಿರುವುದಿಲ್ಲ. ಕೆಲವು ಪ್ರದೇಶಗಳಿಗೆ ಕೆಲವು ಕಾಲದಲ್ಲಿ ಮಾತ್ರ. 'ಏಷ ಹ್ಯೇವ ಸಾಧು ಕರ್ಮ ಕಾರಯತಿ' ಎಂಬ ಶ್ರುತಿಯು ಕೆಲವು ಕಾಲದ ಕೆಲವೇ ಅವಸ್ಥೆಗಳ ನಿಯಾಮಕತ್ವವನ್ನು ಹೇಳುತ್ತದೆ. ಆದ್ದರಿಂದ ಶ್ರುತಿವಿರೋಧವು ಬರುವದಿಲ್ಲ. ಹೀಗೆ ಈಶ್ವರನಿಗೆ ಸರ್ವಾವಸ್ಥಾಪ್ರೇರಕತ್ವವು ಇಲ್ಲ ಎಂದು ಪೂರ್ವಪಕ್ಷ.

ಭಗವಂತನು ರಾಜನಂತೆ ಖಂಡಾಧಿಪತಿಯಲ್ಲ. ಸರ್ವಜನರ ಸಾರ್ವಕಾಲೀನ ಸಾರ್ವದೇಶಿಕ ಸರ್ವಾವಸ್ಥಾಪ್ರೇರಕನು ಭಗವಂತನೇ ಆಗಿದ್ದಾನೆ. 'ಏಷ ಏವ ಸಾಧು ಕರ್ಮ ಕಾರಯತಿ' ಎಂಬ ಶ್ರುತಿಯು ಸಾರ್ವಕಾಲೀನ ಸಾರ್ವದೇಶಿಕವಾದ ಎಲ್ಲ ಕರ್ಮಗಳನ್ನು ಈಶಾಧೀನವೆನ್ನುತ್ತದೆ. ಈ ಶ್ರುತಿಗೆ ಅರ್ಥ-ಸಂಕೋಚ ಮಾಡಲು ಯಾವುದೇ ನಿಮಿತ್ತವಿಲ್ಲ. ಅಭಿಮತವಾದ ಅರ್ಥಕ್ಕೆ ಅನುಕೂಲವಾದ

'ಪ್ರದರ್ಶಕಸ್ತು' ಎಂಬ ಸ್ಮೃತಿಯೂ ಇದೆ. 'ಏಷ ಸ್ವಪ್ನಾನ್' ಎಂದು ಶ್ರುತಿ ಇದೆ. 'ಆತ್ಮಾನಮೇವ ಲೋಕಮುಪಾಸೀತ' ಎಂಬುದಾಗಿ ಭಗವಂತನಿಗೆ ಉಪಾಸ್ಯತ್ವವನ್ನು ವಿಧಾನ ಮಾಡಿರುವದರಿಂದಲೂ ಸಹ ಭಗವಂತನೇ ಸರ್ವಾವಸ್ಥಾಪ್ರೇರಕನು ಎಂದು ತಿಳಿಯುತ್ತದೆ.

## 7. ಮುಗ್ಧಾಧಿಕರಣ

ಈ ಅಧಿಕರಣದಲ್ಲಿ ಜೀವನು ಮೂರ್ಛಾವಸ್ಥೆಯಲ್ಲಿ ಭಗವಂತನಲ್ಲಿ ಅರ್ಧಮಾತ್ರ ಪ್ರವೇಶಿಸುತ್ತಾನೆ ಎಂದು ಹೇಳಲಾಗಿದೆ.

**ಓಂ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ಓಂ**

ಅವಸ್ಥಾತ್ವೇನ ಪ್ರಸಕ್ತವಾದ ಮೋಹವೇ ಇಲ್ಲಿ ವಿಷಯ. ಜೀವನಿಗೆ ಮೋಹವು ಈಶ್ವರನಲ್ಲಿಯೋ ಅಥವಾ ಬೇರೆ ಸ್ಥಳದಲ್ಲಿಯೋ ಎಂದು ಸಂಶಯ.

ಮೂರ್ಛಾವಸ್ಥೆಯಲ್ಲಿ ಜೀವನಿಗೆ ಪರಮಾತ್ಮನಲ್ಲಿ ಪ್ರವೇಶವನ್ನು ಒಪ್ಪದಿದ್ದರೆ ಅದು ಜಾಗ್ರತ್ ಅಥವಾ ಸ್ವಪ್ನವೆನಿಸೀತು. ಇಂದ್ರಿಯಗಳ ಉಪರತಿ ಇರುವದರಿಂದ ಅದು ಸರಿಯಲ್ಲ. ಆದಕಾರಣ ಮೋಹವು ಸ್ವಪ್ನಾದ್ಯವಸ್ಥೆಯಿಂದ ಭಿನ್ನವೂ ಸುಷುಪ್ತಿಗೆ ಸದೃಶವೂ ಆಗಿದೆ. ಇಂದ್ರಿಯಗಳ ಉಪರತಿಯು ಸುಪ್ತಿ ಹಾಗೂ ಮೂರ್ಛಾವಸ್ಥೆಯಲ್ಲಿ ಸಮಾನವಾಗಿದೆ. ಆದ್ದರಿಂದ ಪರಮಾತ್ಮನಲ್ಲಿ ಜೀವನಿಗೆ ಸುಪ್ತಿಯಂತೆ ಮೂರ್ಛಾ-ವಸ್ಥೆಯಲ್ಲಿ ಸಂಪೂರ್ಣಪ್ರವೇಶವನ್ನು ಒಪ್ಪಿದರೆ ಬಾಧಕವಿಲ್ಲ ಎಂದು ಪೂರ್ವಪಕ್ಷ.

ಜೀವನಿಗೆ ಸುಷುಪ್ತಿಯಂತೆ ಮೂರ್ಛಾವಸ್ಥೆಯಲ್ಲಿ ಭಗವಂತನಲ್ಲಿ ಸಂಪೂರ್ಣ ಪ್ರವೇಶವಿಲ್ಲ. ಮೂರ್ಛೆಯು ಸುಪ್ತಿಯಲ್ಲಿ ಸೇರುವದಿಲ್ಲ. 'ದುಃಖಮಾತ್ರಪ್ರತಿಸ್ಮೃತೇಃ' ಎಂಬ ಪ್ರಮಾಣದಿಂದ ಮೂರ್ಛೆ-ಯಲ್ಲಿ ದುಃಖಾನುಸಂಧಾನವಿದೆ. ಸುಪ್ತಿಯಲ್ಲಿ ಸುಖಾನುಸಂಧಾನವಿದೆ. ಆದ್ದರಿಂದ ಸುಷುಪ್ತ್ಯವಸ್ಥೆಯಿಂದ ಭಿನ್ನವಾಗಿದೆ ಮೋಹಾವಸ್ಥೆ. ಜಾಗ್ರದವಸ್ಥೆಯಲ್ಲಿ ಜೀವನು ಹೃದಯದಲ್ಲಿನ ಪ್ರಾಜ್ಞರೂಪೀ ಭಗವಂತನಿಂದ ದೂರನಾಗಿರುತ್ತಾನೆ. ಸ್ವಾಪ್ನಾವಸ್ಥೆಯಲ್ಲಿ ಸಮೀಪದಲ್ಲಿರುತ್ತಾನೆ. ಸುಷುಪ್ತ್ಯವಸ್ಥೆಯಲ್ಲಿ ಭಗವಂತನನ್ನು ಪ್ರವೇಶಿಸುತ್ತಾನೆ. ಮೋಹವು ಈ ಮೂರು ಅವಸ್ಥೆಯಿಂದಲೂ ಭಿನ್ನವಾದ್ದರಿಂದ ಪರಿಶೇಷಾತ್ ಮೋಹದಲ್ಲಿ ಅರ್ಧಪ್ರವೇಶವೆಂದು ತಿಳಿಯಬೇಕು.

## 8. ನ ಸ್ಥಾನತೋಽಪ್ಯಧಿಕರಣ

ಈ ಅಧಿಕರಣದಲ್ಲಿ ವಿಶ್ವತೈಜಸಪ್ರಾಜ್ಞರೂಪಿಭಗವಂತ ಒಬ್ಬನೇ ಆಗಿದ್ದಾನೆ ಎಂದು ಹೇಳಲಾಗಿದೆ. ಈ ಅಧಿಕರಣದಲ್ಲಿ ಒಟ್ಟು ಮೂರು ಸೂತ್ರಗಳಿವೆ.

**ಓಂ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ**

**ಓಂ ನ ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ಓಂ**

**ಓಂ ಅಪಿ ಚೈವಮೇಕೇ ಓಂ**

ಈ ಅಧಿಕರಣಕ್ಕೆ ಸರ್ವಾವಸ್ಥಾಪ್ರೇರಕನಾದ ಪ್ರಕೃತನಾದ ಭಗವಂತನೇ ವಿಷಯ. ಎಲ್ಲ ಶರೀರಗಳಲ್ಲಿ ಜಾಗ್ರದಾದಿಸ್ಥಾನದಲ್ಲಿರುವ ಪರಮಾತ್ಮನು ಭಿನ್ನನೋ ಅಥವಾ ಅಭಿನ್ನನೋ ಎಂದು ಸಂಶಯ.

ಸ್ಥಾನಭೇದದಿಂದ ಘಟಾದಿಗಳಿಗೆ ಭೇದವೂ ಆಕಾಶಾದಿಗಳಿಗೆ ಅಭೇದವೂ ಕಂಡಿದೆ. ಇದೇ ಸಂಶಯಕ್ಕೆ ಕಾರಣ.

ಇಲ್ಲಿ ಪೂರ್ವಪೂಕ್ಷವು ಹೀಗಿದೆ. ಭಿನ್ನಸ್ಥಾನದಲ್ಲಿರುವ ಘಟಾದಿಗಳಂತೆ ಅಕ್ಷಿಕಂಠಾದಿಭಿನ್ನಸ್ಥಾನ-ದಲ್ಲಿರುವ ಈಶ್ವರನೂ ಭಿನ್ನನೇ ಆಗಿದ್ದಾನೆ. 'ಸಪ್ತಾಂಗ ಏಕೋನವಿಂಶತಿಮುಖಃ' ಮುಂತಾದ ರೀತಿಯಿಂದ ಜಾಗ್ರದಾದ್ಯವಸ್ಥಾನಗಳಲ್ಲಿ ಪ್ರತ್ಯೇಕವಾಗಿ ಸಂಪೂರ್ಣರೂಪವೇ ಶ್ರುತವಾದ್ದರಿಂದ ಅನೇಕಸ್ಥಾನಗಳಲ್ಲಿರುವ ವಿಶ್ವಾದಿರೂಪಗಳಿಗೆ ಭೇದವನ್ನೇ ಒಪ್ಪಬೇಕು. ಆಕಾಶವು ಏಕದೇಶದಿಂದ ಮಾತ್ರ ನಾನಾಸ್ಥಾನಗಳಲ್ಲಿ ವ್ಯಾಪ್ತಿಯನ್ನು ಹೊಂದಿದೆ. ಆದ್ದರಿಂದ ಆಕಾಶದ ದೃಷ್ಟಾಂತದಿಂದ ಅಭೇದವನ್ನು ಹೇಳಲು ಸಾಧ್ಯವಿಲ್ಲ. ಹೀಗೆ ರೂಪಗಳಲ್ಲಿ ಭೇದವಿರುವದರಿಂದ, ಭೇದವಿರುವಲ್ಲಿ ಗುಣಗಳಲ್ಲಿ ತಾರತಮ್ಯವು, ಅನುಗ್ರಾಹ್ಯ ಅನುಗ್ರಾಹಕಭಾವವು ಕಂಡಿರುವದರಿಂದ ಈಶ್ವರನು ಮಹಾಮಹಿಮನಲ್ಲ.

ಭಿನ್ನ ಭಿನ್ನ ಸ್ಥಾನದಲ್ಲಿರುವ ಭಗವಂತನ ರೂಪಗಳು ಅನ್ಯೋನ್ಯವಾಗಿ ಅಭಿನ್ನವೇ ಆಗಿವೆ. 'ಸರ್ವೇಷು ಭೂತೇಷ್ವೇತಮೇವ ಬ್ರಹ್ಮೇತ್ಯಾಚಕ್ಷತೇ' ಎಲ್ಲ ಸುರನರಾದಿದೇಹಗಳಲ್ಲಿ, ಚಕ್ಷುರಾದಿಸ್ಥಾನದಲ್ಲಿಯೂ ಇರುವವನು ಒಬ್ಬನೇ ಗುಣಪೂರ್ಣನಾದ ಬ್ರಹ್ಮ ಎಂದು ಶ್ರುತಿಗಳು ಹೇಳುತ್ತಿವೆ ಆದ್ದರಿಂದ ವಿಶ್ವತೈಜಸ-ಪ್ರಾಜ್ಞರೂಪಿ ಭಗವಂತನು ಒಬ್ಬನೇ ಆಗಿದ್ದಾನೆ.

## 9. ಅರೂಪಾಧಿಕರಣ

ಈ ಅಧಿಕರಣದಲ್ಲಿ ಭಗವಂತನು ಅನಿತ್ಯನಲ್ಲ, ಅವನಲ್ಲಿ ಅನಿತ್ಯವಾದದ್ದು ಯಾವುದೂ ಇಲ್ಲ ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ನಾಲ್ಕು ಸೂತ್ರಗಳಿವೆ.

**ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ**

**ಓಂ ಪ್ರಕಾಶವಚ್ಚಾವೈಯರ್ಥ್ಯಮ್ ಓಂ**

**ಓಂ ಆಹ ಚ ತನ್ಮಾತ್ರಮ್ ಓಂ**

**ಓಂ ದರ್ಶಯತಿ ಚಾಥೋ ಅಪಿ ಸ್ಮರ್ಯತೇ ಓಂ**

ಭಕ್ತಿಯೇ ಈ ಅಧಿಕರಣದ ವಿಷಯ. ವಿಷ್ಣುವಿನಲ್ಲಿ ಅದು ಯುಕ್ತವೋ ಅಲ್ಲವೋ ಎಂದು ಸಂಶಯ. ಜ್ಯೋತಿಷ್ಟೋಮವು ಪರಲೋಕಸಾಧನವೆಂದು ವೇದದಲ್ಲಿ ಹೇಳಲಾಗಿದೆ. ಚೈತ್ಯವಂದನವು ಮತಾಂತರದಲ್ಲಿ ಪರಲೋಕಸಾಧನವೆಂದು ಹೇಳಲ್ಪಟ್ಟಿದೆ. ಹೀಗೆ ಯುಕ್ತಾಯುಕ್ತವಾದದ್ದು ಎರಡೂ ಕಂಡಿರುವುದು ಸಂಶಯಕ್ಕೆ ಕಾರಣ.

ಭಗವಂತನಲ್ಲಿ ಅತಿಶಯವಾದ ಭಕ್ತಿಯನ್ನು ಮಾಡಬಾರದು. ಭಗವಂತನು ರೂಪರಹಿತನೆಂದರೆ 'ರುಗ್ಮವರ್ಣಂ' ಮುಂತಾದ ಶ್ರುತಿ ಅಪ್ರಮಾಣವಾಗಬೇಕಾದೀತು. ಭಗವಂತನು ರೂಪವುಳ್ಳವನು ಎಂದರೆ ಅನಿತ್ಯನಾಗಬೇಕಾಗುತ್ತದೆ. 'ಅರೂಪಮವ್ಯಯಮ್' ಎಂಬ ಶ್ರುತಿಯು ಅಪ್ರಮಾಣವಾಗುತ್ತದೆ. ಅನಿತ್ಯ-ಶರೀರವುಳ್ಳವನಲ್ಲಿ ಉಂಟಾಗಲಾರದು. ಹೀಗೆ ಯಾವ ರೀತಿಯಿಂದಲೂ ಭಗವಂತನಲ್ಲಿ ಭಕ್ತಿಯೇ ಅನುಪಪನ್ನವಾಗಿ ಈ ಪಾದವೇ ವ್ಯರ್ಥವಾಗುತ್ತದೆ ಎಂದು ಪೂರ್ವಪಕ್ಷ. ಭಗವಂತನಲ್ಲಿ ಭಕ್ತಿ ಉಪಪನ್ನವೇ

ಆಗಿದೆ ಎಂದು ಸಿದ್ಧಾಂತ. ಏಕೆಂದರೆ ಅವನು ರೂಪರಹಿತನಾಗಿದ್ದಾನೆ. 'ಅರೂಪಮವ್ಯಯಮ್' ಎಂಬ ಶ್ರುತಿಯು ಅವನಿಗೆ ಪ್ರಾಕೃತರೂಪವಿಲ್ಲ ಎಂದು ಪ್ರತಿಪಾದಿಸುತ್ತದೆ. ಭಗವಂತನು ಪ್ರಕೃತಿಗಿಂತಲೂ ಉತ್ತಮನಾಗಿದ್ದಾನೆ. ಆದ್ದರಿಂದ ಅವನಲ್ಲಿ ಪ್ರಾಕೃತರೂಪವಿಲ್ಲವೆಂದು ಸಿದ್ಧವಾಗುತ್ತದೆ. ಈಗ ಅನಿತ್ಯತ್ವ-ಪ್ರಸಂಗವೂ ಇರುವದಿಲ್ಲ. ಈ ರೀತಿ ಭಕ್ತಿಯು ಉಪಪನ್ನವಾದ್ದರಿಂದ ಭಕ್ತಿಯು ಸಾರ್ಥಕವೇ ಆಗಿದೆ.

## 10. ಉಪಮಾಧಿಕರಣ

ಈ ಅಧಿಕರಣದಲ್ಲಿ ಪ್ರತಿಬಿಂಬನಾದ ಜೀವನು ಭಗವಂತನಿಂದ ಭಿನ್ನನಾಗಿದ್ದಾನೆ ಎಂದು ಹೇಳಲಾಗಿದೆ.

**ಓಂ ಅತ ಏವ ಚೋಪಮಾ ಸೂರ್ಯಕಾದಿವತ್ ಓಂ**

ಭಕ್ತಿಯೇ ಈ ಅಧಿಕರಣಕ್ಕೆ ವಿಷಯ. ಪರಮಾತ್ಮನಲ್ಲಿ ಅದು ಯುಕ್ತವೋ ಅಯುಕ್ತವೋ ಎಂದು ಸಂಶಯ. ಯುಕ್ತಾಯುಕ್ತಸಾಧನಗಳು ಕಂಡಿರುವದು ಸಂಶಯಕ್ಕೆ ಕಾರಣ.

ಮತ್ಸ್ಯಾದಿರೂಪಗಳು ಚೇತನಗಳಾಗಿವೆ. ಪರಮಾತ್ಮನ ಅಂಶಗಳಾಗಿ ಪರಮಾತ್ಮನಿಂದ ಅಭಿನ್ನವಾಗಿವೆ. ಅದರಂತೆ ಜೀವನೂ ಚೇತನನಾಗಿದ್ದಾನೆ. ಅಂಶನಾಗಿದ್ದಾನೆ ಆದ್ದರಿಂದ ಜೀವನು ಪರಮಾತ್ಮನಿಂದ ಅಭಿನ್ನ 'ಪೃಥುಗುಪದೇಶಾತ್' ಎಂಬ ಅಧಿಕರಣದಲ್ಲಿ ಔಪಾಧಿಕಭೇದವನ್ನು ಸಮರ್ಥಿಸಲಾಗಿದೆ. ಈ ರೀತಿ ಜೀವಬ್ರಹ್ಮರಿಗೆ ಔಪಾಧಿಕವಾದ ಭೇದವೂ ಸ್ವಾಭಾವಿಕ ಅಭೇದವೂ ಇದೆ. ಹೀಗೆ ತನ್ನಿಂದ ಅಭಿನ್ನನಾದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವಲ್ಲ.

ಜೀವನು ಪರಮಾತ್ಮನ ಪ್ರತಿಬಿಂಬನಾದ್ದರಿಂದ ಪರಮಾತ್ಮನಿಂದ ಅಭಿನ್ನನಲ್ಲ. ಸೂರ್ಯನ ಪ್ರತಿಬಿಂಬವು ಸೂರ್ಯನಿಂದ ಅಭಿನ್ನವಲ್ಲ. 'ರೂಪಂ ರೂಪಂ ಪ್ರತಿರೂಪೋ ಬಭೂವ' ಎಂಬ ಶ್ರುತಿಯು ಜೀವನು ಪ್ರತಿಬಿಂಬನೆಂದು ಹೇಳುತ್ತದೆ. ಜೀವನು ಭಗವಂತನ ಸ್ವರೂಪಾಂಶವಾದಲ್ಲಿ ಮತ್ಸ್ಯಾದಿ ಅವತಾರಗಳಂತೆ ಜೀವನಲ್ಲೂ ಜ್ಞಾನಾನಂದಾದಿಪೂರ್ಣತ್ವವಿರಬೇಕಾದೀತು. ಆದ್ದರಿಂದಲೂ ಪರಮಾತ್ಮನಿಗೂ ಜೀವನಿಗೂ ಅಭೇದವಿಲ್ಲ.

## 11. ಅಂಬುವದಧಿಕರಣ

ಈ ಅಧಿಕರಣದಲ್ಲಿ ಜೀವನು ಜ್ಞಾನಾನಂದರೂಪನಾದರೂ ಅವುಗಳ ಅಭಿವ್ಯಕ್ತಿಗೋಸ್ಕರ ಭಕ್ತಿಯನ್ನು ಮಾಡಲೇಬೇಕು ಎಂದು ಹೇಳಲಾಗಿದೆ.

**ಓಂ ಅಂಬುವದಗ್ರಹಣಾತ್ತು ನ ತಥಾತ್ವಮ್ ಓಂ**

ಇಲ್ಲಿ ಪ್ರಕೃತವಾದ ಭಕ್ತಿಯೇ ವಿಷಯ. ಆ ಭಕ್ತಿಯನ್ನು ಮಾಡಬೇಕೋ ಮಾಡಬಾರದೋ ಎಂದು ಸಂಶಯ. ಲೋಕದಲ್ಲಿ ಕರ್ತವ್ಯವಾದದ್ದು ಮತ್ತು ಅಕರ್ತವ್ಯವಾದದ್ದು ಎರಡೂ ಕಂಡಿರುವದು ಸಂಶಯಕ್ಕೆ ಕಾರಣ.

ನಿತ್ಯಸುಖರೂಪವಾದದ್ದು ಮೋಕ್ಷ. ಆ ಸುಖವು ಸ್ವರೂಪವೇ ಆಗಿದೆ. ಸ್ವರೂಪವು ಆಗಂತುಕವಲ್ಲ. ಸುಪ್ತಿಯಲ್ಲಿ ತನ್ನಷ್ಟಕ್ಕೆ ಆನಂದಾದಿಗಳು ಅಭಿವ್ಯಕ್ತವಾಗುವಂತೆ ಸಾಧನವಿಲ್ಲದೇ ಜೀವನಿಗೆ ಎಂದಾದರೂ ಅಭಿವ್ಯಕ್ತವಾಗುವದರಿಂದ ಮೋಕ್ಷವು ಭಕ್ತಿಯ ಫಲವಲ್ಲ ಆದ್ದರಿಂದ ಕಾರಣ ಭಕ್ತಿಯ ಆಗತ್ಯವಿಲ್ಲ.

ಮೋಕ್ಷವು ಭಕ್ತಿಯ ಫಲವೇ ಆಗಿದೆ. ಜ್ಞಾನಾನಂದಾದಿಗಳು ಜೀವನ ಸ್ವರೂಪವಾಗಿ ನಿತ್ಯಸಿದ್ಧ-ವಾಗಿದ್ದರೂ ಅದರ ಅಭಿವ್ಯಕ್ತಿಯು ಭಕ್ತಿಯಿಂದಲೇ ಆಗುವುದು. ಸುಷುಪ್ತಿಯಲ್ಲಿ ಭಕ್ತಿ ಇಲ್ಲದಿರುವುದ-ರಿಂದ ಸರಿಯಾಗಿ ಜ್ಞಾನಾನಂದದ ಅಭಿವ್ಯಕ್ತಿ ಇಲ್ಲ. 'ಯಮೇವೈಷ ವೃಣುತೇ ತೇನ ಲಭ್ಯಃ' ಮುಂತಾದ ಶ್ರುತಿಸ್ಮೃತಿಗಳಿಂದ ಭಕ್ತಿಯಿಂದಲೇ ಅದರ ಅಭಿವ್ಯಕ್ತಿ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಭಕ್ತಿಯನ್ನು ಮಾಡಲೇಬೇಕು.

## 12. ವೃದ್ಧಿಹ್ರಾಸಾಧಿಕರಣ

ಈ ಅಧಿಕರಣದಲ್ಲಿ ಸಾಧನದ ತಾರತಮ್ಯದಿಂದ ಫಲದಲ್ಲಿ ತಾರತಮ್ಯ ಇದೆ ಎಂದು ಹೇಳಲಾಗಿದೆ. ಇದು ಎರಡು ಸೂತ್ರಗಳನ್ನೊಳಗೊಂಡ ಅಧಿಕರಣ.

**ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಮ್ ಓಂ**

**ಓಂ ದರ್ಶನಾಚ್ಚ ಓಂ**

ಭಕ್ತಿಯೇ ಈ ಅಧಿಕರಣದ ವಿಷಯ. ಭಕ್ತಿಯು ಏಕಪ್ರಕಾರವಾದದ್ದೋ ಅಥವಾ ವೃದ್ಧಿಹ್ರಾಸ-ವುಳ್ಳದ್ದೋ ಎಂದು ಸಂಶಯ. ಇತರ ದೇವತಾಭಕ್ತರಲ್ಲಿ ದ್ವೈವಿಧ್ಯವು ಕಂಡಿರುವುದೇ ಸಂಶಯಕ್ಕೆ ಕಾರಣ.

ಬ್ರಹ್ಮಾದಿದೇವತೆಗಳ ಭಕ್ತಿಯೂ ಮತ್ತು ಮನುಷ್ಯೋತ್ತಮರ ಭಕ್ತಿಯೂ ಏಕಪ್ರಕಾರವಾಗಿದೆ. ಯಾವ ಪ್ರಮಾಣದ ಭಕ್ತಿಯಿಂದ ಮನುಷ್ಯೋತ್ತಮರಿಗೆ ಮೋಕ್ಷವಾಗುತ್ತದೆಯೋ ಅಷ್ಟೇ ಪ್ರಮಾಣದ ಭಕ್ತಿಯಿಂದ ಬ್ರಹ್ಮಾದಿದೇವತೆಗಳಿಗೂ ಮೋಕ್ಷವಾಗುವಾಗ ಅಧಿಕಪ್ರಮಾಣದ ಭಕ್ತಿಯಿಂದ ಪ್ರಯೋಜನವೇನು ? ದುಃಖಾಭಾವರೂಪವಾದ ಮೋಕ್ಷದಲ್ಲಿ ತಾರತಮ್ಯವಿಲ್ಲ ಅಲ್ಲಿ ತಾರತಮ್ಯವಿದ್ದಿದ್ದರೆ ಭಕ್ತಿಯಲ್ಲಿ ತಾರತಮ್ಯವು ಉಪಪನ್ನವಾಗುತ್ತಿತ್ತು ಆದ್ದರಿಂದ ಭಕ್ತಿಯು ಏಕಪ್ರಕಾರವಾಗಿದೆ.

ಭಕ್ತಿಯು ಏಕಪ್ರಕಾರವಾದದ್ದಲ್ಲ ಏಕೆಂದರೆ ಮೋಕ್ಷದ ಆನಂದದಲ್ಲಿ ತಾರತಮ್ಯವಿದೆ. ಬ್ರಹ್ಮಾದಿ-ದೇವತೆಗಳಷ್ಟೇ ಆನಂದವು ಮನುಷ್ಯೋತ್ತಮರಿಗಿಲ್ಲ. ಭಕ್ತಿಯಲ್ಲಿ ತಾರತಮ್ಯವಿಲ್ಲದಿದ್ದಲ್ಲಿ ಮೋಕ್ಷದ ಆನಂದ ತಾರತಮ್ಯವು ನಿರ್ನಿಮಿತ್ತವಾಗಬೇಕಾಗುತ್ತದೆ. ಫಲದಾತೃವಾದ ಭಗವಂತನಲ್ಲಿ ವೈಷಮ್ಯದೋಷವು ಸಂಭವಿಸುತ್ತದೆ ಆದ್ದರಿಂದ ಭಕ್ತಿಯಲ್ಲಿ ವೃದ್ಧಿಹ್ರಾಸವು ಯುಕ್ತವೇ ಆಗಿದೆ.

## 13. ಪಾಲಕತ್ವಾಧಿಕರಣ

ಈ ಅಧಿಕರಣದಲ್ಲಿ ಭಗವಂತನೇ ಪಾಲನಕರ್ತಾ ಎಂದು ಹೇಳಲಾಗಿದೆ.

**ಓಂ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ಓಂ**

ಜಗತ್ತಿನ ಪಾಲನವೇ ಈ ಅಧಿಕರಣದ ವಿಷಯ. ಅದು ವಿಷ್ಣುವಿಗೆ ಯುಕ್ತವೋ ಅಯುಕ್ತವೋ ಎಂದು ಸಂಶಯ. ಜ್ಞಾನೈಶ್ವರ್ಯಾದಿಗುಣಗಳಲ್ಲಿ ಚೈತ್ರಾದಿಗಳಲ್ಲಿ ಕೆಲವು ಯುಕ್ತವಾಗಿರುವುದು ಕೆಲವು ಅಯುಕ್ತವಾಗಿರುವುದೂ ಕಂಡಿದೆ ಇದೇ ಸಂಶಯಕ್ಕೆ ಕಾರಣ.

ಭಗವಂತನು ಜಗತ್ತಿನ ಪಾಲಕನಲ್ಲ. ವಿನಾಶಾಭಾವವೇ ಜಗತ್ತಿನ ರಕ್ಷಣೆ. ಜಗತ್ತನ್ನು ಸೃಷ್ಟಿಸಿದ ಭಗವಂತನು ಅದರ ವಿನಾಶಕ್ಕಾಗಿ ಪ್ರವೃತ್ತಿಮಾಡದಿರುವುದರಿಂದಲೇ ಕಾಲವಿಶೇಷಸಂಬಂಧರೂಪವಾದ ಸ್ಥಿತಿಯು ಸಂಭವಿಸುತ್ತದೆ. ಆದ್ದರಿಂದ ಈಶ್ವರನಿಗೆ ಪಾಲಕತ್ವವನ್ನು ಒಪ್ಪುವ ಅಗತ್ಯವಿಲ್ಲ. ಅವಾಂತರ ಉಪದ್ರವನಿರಾಸಕ್ಕಾಗಿ ಈಶ್ವರವ್ಯಾಪಾರದ ಅಗತ್ಯವಿದೆ ಅದೇ ಪಾಲನೆ ಎನ್ನುವಂತಿಲ್ಲ. ಆ ಅವಾಂತರ ಉಪದ್ರವವನ್ನು ಉಂಟುಮಾಡುವವನೂ ಭಗವಂತನೇ. ಆ ಉಪದ್ರವವನ್ನು ಮಾಡದಿದ್ದರೆ ಸಾಕು. ಹೀಗೆ ಪಾಲಕತ್ವವು ಇಲ್ಲದಿರುವದರಿಂದ ಭಗವಂತನು ಮಹಾಮಹಿಮನಲ್ಲ. ಆದ್ದರಿಂದ ಅವನಲ್ಲಿ ಭಕ್ತಿಯನ್ನು ಮಾಡುವದು ಬೇಕಿಲ್ಲ ಇದು ಪೂರ್ವಪಕ್ಷ.

ಭಗವಂತನು ಈ ಜಗತ್ತಿನ ಪಾಲಕನೂ ಆಗಿದ್ದಾನೆ. 'ನೈತಾವದೇನಾಪರೋ ಅನ್ಯದಸ್ತ್ಯುಕ್ಷಾ ಸ ದ್ಯಾವಾಪೃಥಿವೀ ಬಿಭರ್ತಿ' ಎಂಬ ಶ್ರುತಿಯು ಭಗವಂತನು ಜಗತ್ತಿನ ಸೃಷ್ಟಿಸಂಹಾರಗಳನ್ನು ಮಾತ್ರ ಮಾಡುವದಿಲ್ಲ. ಭಕ್ತರ ಅಭೀಷ್ಟಗಳನ್ನು ನೆರವೇರಿಸುತ್ತಾ ಜಗತ್ತನ್ನು ಸಂರಕ್ಷಿಸುವನು ಎಂದು ಸೃಷ್ಟಿಸಂಹಾರ-ಕರ್ತೃತ್ವವಷ್ಟೇ ಭಗವಂತನಿಗಿರುವದು ಎಂಬುದನ್ನು ನಿಷೇಧಿಸುತ್ತಿದೆ. 'ಸೃಷ್ಟಿಂ ಚ ಪಾಲನಂ ಚೈವ' ಎಂಬ ಸ್ಮೃತಿಯು ಪಾಲನಕರ್ತೃತ್ವವನ್ನು ಹೇಳುತ್ತಿದೆ. ಹೀಗೆ ಅನ್ನಾದಿದಾನರೂಪವಾದ ಪಾಲನಾಖ್ಯವ್ಯಾಪಾರವು ಇರುವದರಿಂದ ಭಗವಂತನು ಮಹಾಮಹಿಮನೇ ಆಗಿದ್ದಾನೆ. ಆದ್ದರಿಂದ ಅವನಲ್ಲಿ ಭಕ್ತಿಯು ಯುಕ್ತವೇ ಆಗಿದೆ.

## 14. ಅವ್ಯಕ್ತತ್ವಾಧಿಕರಣ

ಈ ಅಧಿಕರಣದಲ್ಲಿ ಭಗವಂತನು ಅವ್ಯಕ್ತನಾಗಿದ್ದರೂ 'ಆತ್ಮಾ ವಾರೇ ದ್ರಷ್ಟವ್ಯೋ' ಮುಂತಾದ ಶ್ರುತಿಗಳಿಂದ ಅವನು ಭಕ್ತಿಸಾಧ್ಯವಾದ ಪ್ರಸಾದದಿಂದ ಪ್ರತ್ಯಕ್ಷನಾಗುವನೆಂದು ಹೇಳಲಾಗಿದೆ. ಇಲ್ಲಿ ಒಟ್ಟು ಐದು ಸೂತ್ರಗಳಿವೆ.

**ಓಂ ತದವ್ಯಕ್ತಮಾಹ ಹಿ ಓಂ**

**ಓಂ ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಮ್ ಓಂ**

**ಓಂ ಪ್ರಕಾಶವಚ್ಚಾವೈಶೇಷ್ಯಮ್ ಓಂ**

**ಓಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್ ಓಂ**

**ಓಂ ಅತೋಽನಂತೇನ ತಥಾ ಹಿ ಲಿಂಗಮ್ ಓಂ**

ಭಕ್ತಿಯೇ ಈ ಅಧಿಕರಣದ ವಿಷಯ. ಅದನ್ನು ಮಾಡಬೇಕೋ ಅಥವಾ ಮಾಡಬಾರದೋ ಎಂದು ಸಂಶಯ. ಲೋಕದಲ್ಲಿ ಕರ್ತವ್ಯವಾದ ಸಫಲವ್ಯಾಪಾರಗಳು ಹಾಗೂ ನಿಷ್ಫಲವಾದ ಅಕರ್ತವ್ಯವ್ಯಾಪಾರವೂ ಕಂಡಿದೆ. ಇದೇ ಪ್ರಕೃತ ಸಂಶಯಕ್ಕೆ ಕಾರಣ.

ಭಕ್ತಿಯ ಅಗತ್ಯವಿಲ್ಲ. ಈಶ್ವರನಲ್ಲಿ ಮಹತ್ತ್ವ ಹಾಗೂ ಉದ್ಭೂತರೂಪಗಳಿರುವುದರಿಂದ ಅವನು ವ್ಯಕ್ತನು. ಸ್ತಂಭಾದಿಗಳ ಪ್ರತ್ಯಕ್ಷದಂತೆ ಈಶ್ವರಪ್ರತ್ಯಕ್ಷವೂ ಪ್ರಯತ್ನದಿಂದಲೇ ಸಂಭವಿಸುವಾಗ ಭಕ್ತಿಯ ಪ್ರಯೋಜನವಿಲ್ಲ. ಈಶ್ವರನು ಅವ್ಯಕ್ತನಾದಲ್ಲಿ ಧರ್ಮಾದಿಗಳಂತೆ ಪ್ರತ್ಯಕ್ಷವು ಅಸಂಭಾವಿತವಾದ್ದರಿಂದ

ಆಗಲೂ ಭಕ್ತಿಯ ಅವಶ್ಯಕತೆ ಇಲ್ಲ ಎಂದು ಪೂರ್ವಪಕ್ಷ. ಈಶ್ವರನು ವ್ಯಕ್ತನಲ್ಲ. 'ಅರೂಪಮಕ್ಷರಂ ಬ್ರಹ್ಮ' ಎಂಬ ಶ್ರುತಿಯು ಈಶ್ವರನನ್ನು ಅರೂಪ ಎಂದರೆ ರೂಪರಹಿತನೆಂದು ಹೇಳುತ್ತದೆ. ಪ್ರತ್ಯಕ್ಷವಾಗಲು ಪ್ರಯೋಜಕವಾದ ಪ್ರಾಕೃತರೂಪವು ಅವನಲ್ಲಿ ಇಲ್ಲ. ಹೀಗೆ ಅವನು ಅವ್ಯಕ್ತನಾಗಿದ್ದರೂ 'ಆತ್ಮಾ ವಾರೇ ದ್ರಷ್ಟವ್ಯೋ' ಮುಂತಾದ ಶ್ರುತಿಗಳಿಂದ ಅವನು ಭಕ್ತಿಸಾಧ್ಯವಾದ ಪ್ರಸಾದದಿಂದ ಪ್ರತ್ಯಕ್ಷನಾಗುವನೆಂದು ಸಿದ್ಧವಾಗುತ್ತದೆ. ಆದ್ದರಿಂದ ಭಕ್ತಿಯ ಅಗತ್ಯವಿದೆ.

## 15. ಅಹಿಕುಂಡಲಾಧಿಕರಣ

ಈ ಅಧಿಕರಣದಲ್ಲಿ ಗುಣರೂಪನಾಗಿದ್ದರೂ ಗುಣಿಯೂ ಆಗಿದ್ದಾನೆ ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ನಾಲ್ಕು ಸೂತ್ರಗಳಿವೆ.

**ಓಂ ಉಭಯವ್ಯಪದೇಶಾತ್ತ್ವಹಿಕುಂಡಲವತ್ ಓಂ**

**ಓಂ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ**

**ಓಂ ಪೂರ್ವವದ್ವಾ ಓಂ**

**ಓಂ ಪ್ರತಿಷೇದಾಚ್ಚ ಓಂ**

ಭಕ್ತಿಯೇ ಈ ಅಧಿಕರಣಕ್ಕೆ ವಿಷಯ. ಅದನ್ನು ಮಾಡಬೇಕೋ ಮಾಡಬಾರದೋ ಎಂದು ಸಂಶಯ. ಲೋಕದಲ್ಲಿ ಕರ್ತವ್ಯವಾದದ್ದು ಅಕರ್ತವ್ಯವಾದದ್ದು ಎರಡೂ ಕಂಡಿರುವುದೇ ಸಂಶಯಕ್ಕೆ ಕಾರಣ.

ಭಗವಂತನಲ್ಲಿ ಭಕ್ತಿ ಮಾಡುವದು ಬೇಕಿಲ್ಲ. ಸಮವಾಯಸಂಬಂಧವನ್ನು ನಿರಾಕರಿಸಿರುವುದರಿಂದ ಭಗವಂತನಲ್ಲಿ ಆನಂದಾದಿಗುಣಗಳಿಂದ ಎಂದು ಹೇಳಲು ಸಾಧ್ಯವಿಲ್ಲ. ಭಗವಂತನನ್ನು ಆನಂದಾದಿಗುಣ-ಸ್ವರೂಪ ಎಂದು ಅಂಗೀಕರಿಸಲಾಗಿದೆ. ಗುಣಸ್ವರೂಪನು ಗುಣಶಾಲಿಯಾಗುವುದು ಯುಕ್ತಿ ವಿರುದ್ಧವು. ಆನಂದಾದಿಭೋಕ್ತೃತ್ವವಿಲ್ಲದಿರುವುದರಿಂದ ಆನಂದಾದಿಸ್ವರೂಪನೆಂದು ಮಹಾಮಹಿಮನಾಗುವದಿಲ್ಲ. ಆದಕಾರಣ ಅವನಲ್ಲಿ ಭಕ್ತಿಯು ಯುಕ್ತವಲ್ಲ.

'ಆನಂದೋ ಬ್ರಹ್ಮೇತಿ ವ್ಯಜನಾತ್' ಎಂಬ ಶ್ರುತಿಯು ಬ್ರಹ್ಮನನ್ನು ಆನಂದಸ್ವರೂಪ ಎನ್ನುತ್ತಿದೆ. 'ಆನಂದಂ ಬ್ರಹ್ಮಣೋ ವಿದ್ವಾನ್' ಎಂಬ ಶ್ರುತಿಯು ಬ್ರಹ್ಮನನ್ನು ಆನಂದವುಳ್ಳವನು ಎನ್ನುತ್ತದೆ. ಆದ್ದರಿಂದ ಬ್ರಹ್ಮನು ಗುಣಸ್ವರೂಪನಾದರೂ ಆನಂದಾದಿಗುಣವುಳ್ಳವನು ಎನ್ನುವದು ಯುಕ್ತವಾಗಿದೆ. ಶ್ರುತಿಸಿದ್ಧ-ವಾದರೂ ಇದು ಹೇಗೆ ಯುಕ್ತವಾಗುತ್ತದೆ ಎಂದರೆ ಕುಂಡಲವು ಸರ್ಪಕ್ಕಿಂತ ಭಿನ್ನವಾಗದೇ ಸರ್ಪ-ಸ್ವರೂಪವೇ ಆಗಿದೆ. ಆದರೂ ವಿಶೇಷಬಲದಿಂದ ಸರ್ಪದ ಕುಂಡಲ ಎಂಬ ವ್ಯವಹಾರದಂತೆ ಆನಂದಾದಿಗುಣಗಳು ಬ್ರಹ್ಮಸ್ವರೂಪವೇ ಆಗಿದ್ದರೂ ವಿಶೇಷಶಕ್ತಿಯಿಂದ ಬ್ರಹ್ಮಧರ್ಮಗಳೂ ಆಗುತ್ತವೆ.

## 16. ಪರಮತಾಧಿಕರಣ

ಈ ಅಧಿಕರಣದಲ್ಲಿ ಪರಮಾತ್ಮನ ಆನಂದವು ವಿಲಕ್ಷಣವಾದದ್ದು ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ಮೂರು ಸೂತ್ರಗಳಿವೆ.

**ಓಂ ಪರಮತಃ ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ಓಂ**
**ಓಂ ದರ್ಶನಾತ್ ಓಂ**
**ಓಂ ಬುದ್ಧ್ಯರ್ಥಃ ಪಾದವತ್ ಓಂ**

ಪ್ರಕೃತವಾದ ಭಗವಂತನ ಗುಣಗಳೇ ಇಲ್ಲಿ ವಿಷಯ. ಆ ಗುಣಗಳು ಲೌಕಿಕವೋ ಅಥವಾ ಅಲೌಕಿಕವೋ ಎಂದು ಸಂಶಯ. ಗುಣಗಳು ಭಗವಂತನಿಗೆ ಸಂಬಂಧಿಸಿರುವುದರಿಂದ ಅಲೌಕಿಕ ಎನ್ನಬಹುದು. ಆದರೆ ಜ್ಞಾನಾನಂದಾದಿಲೋಕಪ್ರಸಿದ್ಧಶಬ್ದಗಳಿಂದಲೇ ಅವುಗಳನ್ನು ಕರೆದಿರುವುದರಿಂದ ಲೌಕಿಕ ಎನ್ನಬಹುದು. ಇದೇ ಸಂಶಯಕ್ಕೆ ಕಾರಣ.

ಬ್ರಹ್ಮನ ಆನಂದಾದಿಗುಣಗಳು ಲೋಕದ ಆನಂದಾದಿಸದೃಶವೇ ಆಗಿವೆ. ಆನಂದಾದಿಶಬ್ದವಾಚ್ಯ-ವಾಗಿರುವುದರಿಂದ ಘಟವಿಲಕ್ಷಣವಾದದ್ದನ್ನು ಘಟ ಎಂದು ವ್ಯವಹರಿಸುವದಿಲ್ಲ. ಆನಂದಾದಿಗಳು ಲೋಕವಿಲಕ್ಷಣವಾದಲ್ಲಿ ಅವುಗಳಿಗೆ ಆನಂದಾದಿಶಬ್ದವಾಚ್ಯತ್ವವಿಲ್ಲ. ಆನಂದಾದಿಶಬ್ದವಾಚ್ಯತ್ವವಿದ್ದಲ್ಲಿ ಲೋಕವಿಲಕ್ಷಣವಾಗಬಾರದು. 'ಆನಂದಂ ಬ್ರಹ್ಮಣೋ ವಿದ್ವಾನ್' ಇತ್ಯಾದಿವಾಕ್ಯಗಳಲ್ಲಿ ಆನಂದಶಬ್ದವು ಶ್ರುತವಾಗಿದೆ. ಲೌಕಿಕ ಆನಂದಾದಿಗುಣಗಳುಳ್ಳ ಬ್ರಹ್ಮನಲ್ಲಿ ಭಕ್ತಿಯು ಯುಕ್ತವಲ್ಲ.

ಬ್ರಹ್ಮನ ಆನಂದಾದಿಗುಣಗಳು ಆನಂದಾದಿಶಬ್ದವಾಚ್ಯವಾಗಿದ್ದರೂ ಅವು ಲೌಕಿಕವಲ್ಲ. ಲೋಕಸಿದ್ಧ-ವಾದ ಆನಂದಾದಿಗಳಲ್ಲಿ ಅಸಂಭಾವಿತವಾದ ಲೋಕಾಧಾರತ್ವ, ಪೂರ್ಣತ್ವ, ಬಿಂಬ-ಪ್ರತಿಬಿಂಬಭಾವ-ಸಂಬಂಧ ಲೌಕಿಕಾನಂದದ ಭೇದ ಇವೆಲ್ಲವೂ ಭಗವಂತನ ಆನಂದಾದಿಗುಣಗಳಲ್ಲಿ ಇರುವುದೆಂದು ಶ್ರುತಿಸ್ಮೃತಿಗಳು ಹೇಳಿರುವದರಿಂದ ಲೌಕಿಕ ಆನಂದಾದಿಗುಣಗಳಿಗಿಂತ ಬ್ರಹ್ಮನ ಆನಂದಾದಿಗುಣಗಳು ವಿಲಕ್ಷಣವಾಗಿವೆ.

## 17. ಸ್ಥಾನವಿಶೇಷಾಧಿಕರಣ

ಈ ಅಧಿಕರಣದಲ್ಲಿ ಭಗವಂತನ ಆನಂದದ ಪ್ರತಿಬಿಂಬವಾದ ಬ್ರಹ್ಮಾದಿಗಳ ಆನಂದದಲ್ಲಿ ತಾರತಮ್ಯವಿದೆ ಎಂದು ಹೇಳಲಾಗಿದೆ. ಇಲ್ಲಿ ಎರಡು ಸೂತ್ರಗಳಿವೆ.

**ಓಂ ಸ್ಥಾನವಿಶೇಷಾತ್ ಪ್ರಕಾಶಾದಿವತ್ ಓಂ**
**ಓಂ ಉಪಪತ್ತೇಶ್ಚ ಓಂ**

ಬ್ರಹ್ಮಾದಿದೇವತೆಗಳ ಆನಂದಾದಿಗಳು ವಿಷಯ. ಅವು ಭಗವಂತನ ಆನಂದಾದಿಗಳ ಪ್ರತಿಬಿಂಬವೋ ಅಥವಾ ಬಿಂಬವೋ ಎಂದು ಸಂಶಯ. ಕೆಲವು ಪ್ರತಿಬಿಂಬವಾಗಿ ಮತ್ತೆ ಕೆಲವು ಅಪ್ರತಿಬಿಂಬವಾಗಿ ಕಂಡಿರುವುದು ಸಂಶಯಕ್ಕೆ ಕಾರಣ.

'ವೃದ್ಧಿಹ್ರಾಸಭಾಕ್ತ್ವಮ್' ಎಂಬ ಸೂತ್ರದಲ್ಲಿ ಬ್ರಹ್ಮಾದಿದೇವತೆಗಳ ಆನಂದದಲ್ಲಿ ವೈಚಿತ್ರ್ಯವನ್ನು ಹೇಳಲಾಗಿದೆ. ಬ್ರಹ್ಮಾದಿಗಳ ಆನಂದಾದಿಗಳು ಪರಮಾತ್ಮನ ಆನಂದಾದಿಗಳ ಪ್ರತಿಬಿಂಬವಾದರೆ ಬಿಂಬವಾದ ಪರಮಾತ್ಮನ ಆನಂದಾದಿಗುಣದಲ್ಲಿಯೂ ತಾರತಮ್ಯವು ಇರಬೇಕಾಗುತ್ತದೆ. ಆದ್ದರಿಂದ ಪರಮಾತ್ಮನ ರೂಪಗಳಲ್ಲಿ ಗುಣತಾರತಮ್ಯದಿಂದಾಗಿ ಭಕ್ತಿಯು ಅಯುಕ್ತವಾಗುತ್ತದೆ ಎಂದು ಪೂರ್ವಪಕ್ಷ. ಬ್ರಹ್ಮಾದಿಗಳ

ಆನಂದಾದಿಗಳು ಶ್ರೀಹರಿಯ ಆನಂದಾದಿಗಳ ಪ್ರತಿಬಿಂಬವೇ ಆಗಿದೆ. ಸೂರ್ಯಕಾಂತದಲ್ಲಿರುವ ಸೂರ್ಯಪ್ರತಿಬಿಂಬಕ್ಕೆ ಅಗ್ನಿಜನಕತ್ವಶಕ್ತಿಯು ಇದೆ. ಜಲದಲ್ಲಿ ಮೂಡುವ ಸೂರ್ಯಪ್ರತಿಬಿಂಬಕ್ಕೆ ಆ ಶಕ್ತಿ ಇಲ್ಲ. ಸೂರ್ಯಕಾಂತದಲ್ಲಿರುವ ಸೂರ್ಯಪ್ರತಿಬಿಂಬಕ್ಕೆ ಅಗ್ನಿಯನ್ನು ಹುಟ್ಟಿಸುವ ಶಕ್ತಿ ಬರಲು ಕಾರಣ ಸೂರ್ಯಕಾಂತದಲ್ಲಿರುವ ಆಧಿಕ್ಯ. ಅದರಂತೆ ಬ್ರಹ್ಮಾದಿಗಳಲ್ಲಿ ಭಕ್ತ್ಯಾದಿಗುಣಗಳು ವಿಶೇಷವಾಗಿರುವ ಪ್ರಯುಕ್ತ ಭಗವಂತನ ಆನಂದದ ಪ್ರತಿಬಿಂಬವಾದ ಬ್ರಹ್ಮಾದಿಗಳ ಆನಂದದಲ್ಲಿ ವೈಚಿತ್ರ್ಯವಿದೆ. ಆದ್ದರಿಂದ ಶ್ರೀಹರಿಯಲ್ಲಿ ಭಕ್ತಿಯು ಕರ್ತವ್ಯವಾಗಿದೆ.

## 18. ಪ್ರತಿಷೇಧಾಧಿಕರಣ

ಈ ಅಧಿಕರಣದಲ್ಲಿ ಧ್ಯಾನಕಾಲದಲ್ಲಿ ಗೋಚರಿಸುವ ರೂಪವೇ ಭಗವಂತನಲ್ಲ ಎಂದು ಹೇಳಲಾಗಿದೆ.

**ಓಂ ತಥಾಽನ್ಯತ್ ಪ್ರತಿಷೇಧಾತ್ ಓಂ**

ಬ್ರಹ್ಮನೇ ಈ ಅಧಿಕರಣಕ್ಕೆ ವಿಷಯ. ಬ್ರಹ್ಮನು ವ್ಯಕ್ತನೋ ಅವ್ಯಕ್ತನೋ ಎಂದು ಸಂಶಯ. ಲೋಕದಲ್ಲಿ ವ್ಯಕ್ತ ಹಾಗೂ ಅವ್ಯಕ್ತವಾದ ಎರಡು ವಿಧಪದಾರ್ಥಗಳು ಕಂಡಿರುವುದೇ ಸಂಶಯಕ್ಕೆ ಕಾರಣ.

ಧ್ಯಾನಕಾಲದಲ್ಲಿ ಚಿತ್ತದಲ್ಲಿ ಬ್ರಹ್ಮನು ತೋರುವದರಿಂದ ಅವ್ಯಕ್ತನಲ್ಲ. ಧ್ಯಾನಕಾಲದಲ್ಲಿ ತೋರಿದವನು ಬ್ರಹ್ಮನೇ ಅಲ್ಲ ಎನ್ನುವದು ಸರಿಯಲ್ಲ. 'ಓಂ ಫಲಮತ ಉಪಪತ್ತೇಃ ಓಂ' ಎಂಬ ಸೂತ್ರದಲ್ಲಿ ಬ್ರಹ್ಮನೇ ಫಲನೀಡುವವನು. ಧ್ಯಾನದಲ್ಲಿ ತೋರಿದ್ದು ಬ್ರಹ್ಮನಲ್ಲವಾದರೆ ಧ್ಯಾನವೇ ವ್ಯರ್ಥವಾಗುತ್ತದೆ. ಧ್ಯಾತೃ-ಪುರುಷರ ಬಾಹುಲ್ಯದಿಂದ ಧ್ಯೇಯವಾದ ಬ್ರಹ್ಮರೂಪಗಳಿಗೆ ನಾನಾತ್ವವು ಪ್ರಾಪ್ತವಾಗುತ್ತದೆ. ಹೊರತು ಬ್ರಹ್ಮಭೇಧವು ಉಂಟಾಗುವದಿಲ್ಲ. ಆದ್ದರಿಂದ ಧ್ಯಾನದಲ್ಲಿ ಪ್ರತೀತವಾದದ್ದೇ ಬ್ರಹ್ಮಪುರುಷಪ್ರಯತ್ನದಿಂದ ಅವನು ವ್ಯಕ್ತನಾಗುವದರಿಂದ ಅವನಲ್ಲಿ ಭಕ್ತಿಯ ಅಗತ್ಯವಿಲ್ಲ ಎಂದು ಪೂರ್ವಪಕ್ಷ.

'ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ' ಎಂಬ ಶ್ರುತಿಯಲ್ಲಿ ಧ್ಯಾನದಲ್ಲಿ ಪ್ರತೀತ-ವಾದ ವಸ್ತುವಿಗೆ ಬ್ರಹ್ಮತ್ವವು ನಿಷೇಧಿಸಲ್ಪಟ್ಟಿದೆ. ಮನಸ್ಸಿನಲ್ಲಿ ತೋರುವ ಪ್ರತಿಮೆಯು ಪ್ರಾಕೃತ, ಮಾನಸವಾಸನಾಮಯವಾದದ್ದು. ಅನೇಕ ದುರ್ಲಕ್ಷಣಗಳಿಂದ ಯುಕ್ತವಾದದ್ದು. ಭಗವಂತನು ಅಪ್ರಾಕೃತ ಅನಂತಗುಣಪೂರ್ಣನು. ದೋಷರಹಿತನು ಹೀಗೆ ವೈಲಕ್ಷಣ್ಯವಿರುವಾಗ ಧ್ಯಾನದಲಿ ತೋರಿದ್ದು ಬ್ರಹ್ಮನಾಗಲು ಹೇಗೆ ಸಾಧ್ಯ? 'ಪಶ್ಯಂತಿ ಪರಮಂ ಬ್ರಹ್ಮ' ಎಂಬಲ್ಲಿ ಹೇಳಿದಂತೆ ಧ್ಯಾನಕಾಲದಲ್ಲಿ ಪ್ರತೀತವಾದ ವಾಸನಾಮಯಪ್ರತಿಮೆಯಲ್ಲಿ ಇರುವ ಪರಮಾತ್ಮನೇ ಫಲದಾತೃ ಆಗಿದ್ದಾನೆ. ಆದ್ದರಿಂದ ಪರಮಾತ್ಮನಲ್ಲಿ ಭಕ್ತಿಯು ಯುಕ್ತವೇ ಆಗಿದೆ.

## 19. ಸರ್ವಗತತ್ವಾಧಿಕರಣ

ಈ ಅಧಿಕರಣದಲ್ಲಿ ಎಲ್ಲ ದೇಶಕಾಲಗಳಲ್ಲಿಯೂ ಭಗವಂತನೇ ಸೃಷ್ಟಿಕರ್ತಾ ಎಂದು ಹೇಳಲಾಗಿದೆ.

**ಓಂ ಅನೇನ ಸರ್ವಗತತ್ವಮಾಯಾಮಯಶಬ್ದಾದಿಭ್ಯಃ ಓಂ**

ಪ್ರಕೃತನಾದ ಪರಮೇಶ್ವರನೇ ಇಲ್ಲಿ ವಿಷಯ. ಎಲ್ಲದೇಶಕಾಲಗಳಲ್ಲಿಯೂ ಅವನೇ ಸೃಷ್ಟಿಕರ್ತನೋ ? ಅಥವಾ ಭಿನ್ನಕಾಲದಲ್ಲಿ ಭಿನ್ನವ್ಯಕ್ತಿಯೋ ? ಎಂದು ಸಂಶಯ. 'ಜನ್ಮಾದ್ಯಸ್ಯ ಯತಃ' ಎಂಬಲ್ಲಿ ಹೇಳಿದ ಜನ್ಮಾದಿಕಾರಣತ್ವವು ಎರಡು ರೀತಿಯಿಂದಲೂ ಸಂಭವಿಸುವುದೇ ಸಂಶಯಕ್ಕೆ ಕಾರಣವಾಗಿದೆ.

ಲೋಕದಲ್ಲಿ ಬೇರೆ ಬೇರೆ ಕಾಲಗಳಲ್ಲಿ ಭಿನ್ನ ಭಿನ್ನರಾದ ರಾಜರು ನಿಯಾಮಕರಾಗಿರುವುದು ಕಂಡಿದೆ. ಅದರಂತೆ ಕಾಲಾಂತರದಲ್ಲಿ ಬೇರೆಯವರಿಂದ ಸೃಷ್ಟ್ಯಾದಿಕ್ರಿಯಯು ಬೇರೆಯವರಿಂದ ಸಾಧ್ಯವಿಲ್ಲ ಎನ್ನಬಾರದು. ರಾಮಕೃಷ್ಣಾದಿಅವತಾರಗಳಲ್ಲಿ ಅನೇಕವಿಧವಾದ ಲೋಕದಲ್ಲಿ ಅಸಂಭಾವಿತವಾದ ಲೀಲೆಗಳನ್ನು ತೋರಿಸಿದ್ದಾನೆ. ಹಾಗೆಯೇ ಮತ್ತೊಬ್ಬನಿಗೆ ಸ್ವಾತಂತ್ರ್ಯವನ್ನು ನೀಡುತ್ತಾನೆ. ಅದರಿಂದ ಸೃಷ್ಟ್ಯಾದಿಗಳು ನಡೆಯುತ್ತವೆ. ಹೀಗೆ ಬೇರೆಯವರಿಂದಲೂ ಸ್ವತಂತ್ರವಾಗಿ ಸೃಷ್ಟ್ಯಾದಿಗಳು ನಡೆಯುವದ- ರಿಂದ ವಿಷ್ಣುವಿನಲ್ಲಿ ಭಕ್ತಿಯು ಯುಕ್ತವಲ್ಲ.

'ಏಷ ಸರ್ವ ಏಷ ಸರ್ವಗತಃ' ಮುಂತಾದ ಶ್ರುತಿಸ್ಮೃತಿಗಳು ಎಲ್ಲ ದೇಶಕಾಲಗಳಲ್ಲಿಯೂ ಪರಮಾತ್ಮನು ವ್ಯಾಪ್ತನಾಗಿದ್ದಾನೆ. ಅದು ಸೃಷ್ಟ್ಯಾದಿಗಳಿಗಾಗಿ ತಾನೇ ? ಅವನಿಂದಲೇ ಸೃಷ್ಟ್ಯಾದಿಗಳು ಆಗುತ್ತವೆ ಎಂದು ತಿಳಿಯುತ್ತದೆ. ಸೃಷ್ಟಾದಿವಿಷಯಕವಾದ ಕ್ರೀಡೆಯು ಮಾಯಾಮಯನಾದ ಪರಮಾತ್ಮನಿಗೆ ನಿಯತವಾಗಿದೆ. ಅವನು ತನ್ನ ಸ್ವಾತಂತ್ರ್ಯವನ್ನು ಇತರರಿಗೆ ಎಂದೂ ನೀಡುವದಿಲ್ಲ. ಅಸ್ವತಂತ್ರನಾದವನು ಚಂಚಲಚಿತ್ತನಾದವನಾದ್ದರಿಂದ ಅಶಕ್ತಿಯಿಂದ ಚಲಿಸುತ್ತಾನೆ. ತನ್ನ ಕಾರ್ಯದಿಂದ ಚ್ಯುತನಾಗುತ್ತಾನೆ. ಅವನ ಕಾರ್ಯವನ್ನು ಇತರರು ಮಾಡುತ್ತಾರೆ. ಸರ್ವಸ್ವತಂತ್ರನೂ ಅಪರಿಮಿತ- ಶಕ್ತಿಯುಳ್ಳವನೂ ನಿರ್ದುಷ್ಟನೂ ಆದ ಭಗವಂತನು ಸೃಷ್ಟ್ಯಾದಿಸ್ವಾತಂತ್ರ್ಯವನ್ನು ಇತರರಿಗೆ ಏಕೆ ನೀಡು- ತ್ತಾನೆ. ಹೀಗೆ ಕಾಲಾಂತರದಲ್ಲಿ ಮತ್ತೊಬ್ಬನು ಜಗತ್‌ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂಬ ವಿಷಯವು ಆಧಾರವಿಲ್ಲವಾದ್ದರಿಂದ ಶ್ರೀಹರಿಯಲ್ಲಿ ಭಕ್ತಿಯು ಯುಕ್ತವೇ ಆಗಿದೆ.

## 20. ಫಲಾಧಿಕರಣ

ಈ ಅಧಿಕರಣದಲ್ಲಿ ಫಲದಾತೃವು ಭಗವಂತನೇ ಹೊರತು ಕರ್ಮವಲ್ಲ ಎಂದು ಹೇಳಲಾಗಿದೆ. ಇಲ್ಲಿ ಒಟ್ಟು ನಾಲ್ಕು ಸೂತ್ರಗಳಿವೆ.

**ಓಂ ಫಲಮತ ಉಪಪತ್ತೇಃ ಓಂ**

**ಓಂ ಶ್ರುತತ್ವಾಚ್ಚ ಓಂ**

**ಓಂ ಧರ್ಮಂ ಜೈಮಿನಿರತ ಏವ ಓಂ**

**ಓಂ ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ಓಂ**

ಈ ಅಧಿಕರಣಕ್ಕೆ ಶ್ರೀಮನ್ನಾರಾಯಣನೇ ವಿಷಯ. ಅವನು ಫಲದಾತೃವೋ ಅಥವಾ ಅಲ್ಲವೋ ಎಂದು ಸಂಶಯ. ಕರ್ಮದಿಂದ ಫಲವೆಂದು ನಿರೀಶ್ವರವಾದಿಗಳು, ಬ್ರಹ್ಮನಿಂದ ಫಲವೆಂದು ಸೇಶ್ವರ- ವಾದಿಗಳು ಹೇಳುತ್ತಾರೆ. ಈ ವಿಪ್ರತಿಪತ್ತಿಯೇ ಸಂಶಯಕ್ಕೆ ಕಾರಣ. ಕರ್ಮವೇ ಫಲವನ್ನು ನೀಡುವದು. ಕರ್ಮವಿದ್ದರೆ ಫಲಪ್ರಾಪ್ತಿ. ಕರ್ಮವಿಲ್ಲದಿದ್ದರೆ ಫಲಪ್ರಾಪ್ತಿ ಇಲ್ಲ ಹೀಗೆ ಅನ್ವಯವ್ಯತಿರೇಕಗಳಿಂದ ಫಲಕ್ಕೆ ಕರ್ಮವು ಕಾರಣವೆಂದು ಸಿದ್ಧವಾಗಿದೆ. ಈಶ್ವರನು ಫಲಪ್ರದನೆಂಬ ಪಕ್ಷದಲ್ಲಿ ಅವನು ಕರ್ಮಾನುಸಾರಫಲ ನೀಡಬೇಕು. ಇಲ್ಲದಿದ್ದರೆ ವೈಷಮ್ಯಾದಿದೋಷ ವೇದಾಪ್ರಾಮಾಣ್ಯಪ್ರಸಂಗ ಬರುತ್ತದೆ. ಫಲಪ್ರದವಾದದ್ದು ಕರ್ಮವೇ ಆಗಿರುವುದರಿಂದ ಶ್ರೀಮನ್ನಾರಾಯಣನಲ್ಲಿ ಭಕ್ತಿಯು ಅನಾವಶ್ಯಕ ಎಂದು ಪೂರ್ವಪಕ್ಷ.

ಕರ್ಮವು ಅಚೇತನವಾದ್ದರಿಂದ ಅದು ಪ್ರಧಾನಫಲದಾತೃವಾಗಲು ಸಾಧ್ಯವಿಲ್ಲ. ಪರಮೇಶ್ವರನು ಮಹಾಚೇತನನಾದ್ದರಿಂದ ಅವನು ಮಾತ್ರ ಪ್ರದಾನಫಲದಾತೃವಾಗುವನು.

**ಇಲ್ಲಿಗೆ ತೃತೀಯಾಧ್ಯಾಯದ ದ್ವಿತೀಯಪಾದವು ಮುಗಿಯಿತು.**

## ಕೃತಜ್ಞತಾ ಸಮರ್ಪಣೆ

ಹೀಗೆ ಮೂರನೆಯ ಅಧ್ಯಾಯದ ಒಂದು ಹಾಗೂ ಎರಡನೇ ಪಾದಗಳ ವ್ಯಾಖ್ಯಾನಸಹಿತವಾದ ಸಂಪಾದನಾಕಾರ್ಯವನ್ನು ಹರಿವಾಯುಗುರುಗಳು ನಮ್ಮಲ್ಲಿ ನಿಂತು ಯಥಾಯೋಗ್ಯವಾಗಿ ಮಾಡಿಸಿ-ದ್ದಾರೆ. ಇದನ್ನು ಅಸ್ಮದ್ಗುರ್ವಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಯಾಮಿ ಗ್ರಂಥಪ್ರತಿಪಾದ್ಯ ನಾರಾಯಣನಿಗೆ ಅನಂತಾನಂತ ಭಕ್ತಿಪೂರ್ವಕ ಸಾಷ್ಟಾಂಗಪ್ರಣಾಮಗಳೊಂದಿಗೆ ಸಮರ್ಪಿಸುತ್ತಿದ್ದೇವೆ. ಈ ಸಂದರ್ಭದಲ್ಲಿ ಅನ್ನದಾನ-ವಿದ್ಯಾದಾನಾದಿಗಳನ್ನು ಮಾಡಿ ನಮ್ಮ ಸ್ವರೂಪೋದ್ಧಾರ ಮಾಡಿದ ಪರಮಪೂಜ್ಯ ವಿದ್ಯಾಗುರುಗಳಾದ **ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರ** ಪಾದಾರವಿಂದ-ಗಳಲ್ಲಿ ಭಕ್ತಿಪೂರ್ವಕ ಸಾಷ್ಟಾಂಗ ಪ್ರಣಾಮಗಳು. ಗ್ರಂಥಸಂಪಾದನಾ ಕಾರ್ಯದಲ್ಲಿ ಮೊದಲಿನಿಂದಲೂ ಉಪಯುಕ್ತ ಸಲಹೆ ನೀಡಿ ಅನುಗ್ರಹಿಸುತ್ತಿರುವ ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ ವಿದ್ಯಾಗುರುಗಳಾದ ಗುತ್ತಲ ರಂಗಾಚಾರ್ಯರಿಗೆ ಅನಂತಾನಂತ ಪ್ರಣಾಮಗಳು. ತಮ್ಮ ಇಳಿಯ ವಯಸ್ಸಿ-ನಲ್ಲಿಯೂ ಅಮೂಲ್ಯ ಸಲಹೆ ನೀಡಿ ಮಾರ್ಗದರ್ಶನ ಮಾಡುತ್ತಿರುವ ದ್ವೈತವೇದಾಂತ ಸಂಶೋಧನಾ ಕೇಂದ್ರದ ನಿರ್ದೇಶಕರಾದ ಪ್ರೊ. ಕೆ.ಟಿ. ಪಾಂಡುರಂಗಿ ಅವರಿಗೆ ಅನಂತ ನಮಸ್ಕಾರಗಳು. ಪ್ರಸ್ತುತ ಈ ಕಾರ್ಯದಲ್ಲಿ ನಮ್ಮನ್ನು ತೊಡಗಿಸಿ ಆದರ ಪ್ರಕಾಶನಕ್ಕೆ ಬೇಕಾದ ಎಲ್ಲ ವ್ಯವಸ್ಥೆಗಳನ್ನು ಮಾಡಿ ಮಾರ್ಗದರ್ಶನ ಮಾಡುತ್ತಿರುವ ವಿದ್ಯಾಧೀಶ ಸ್ನಾತಕೋತ್ತರ ಸಂಸ್ಕೃತ ಶೋಧಕೇಂದ್ರದ ನಿರ್ದೇಶಕರಾದ ಡಾ॥ ಸತ್ಯಧ್ಯಾನಾಚಾರ್ಯ ಕಟ್ಟಿಯವರಿಗೆ ಅನಂತ ನಮಸ್ಕಾರಗಳನ್ನು ಸಮರ್ಪಿಸುತ್ತಿದ್ದೇವೆ.

ಅಭಿನವ ಚಂದ್ರಿಕಾ ಪ್ರತಿಯನ್ನು ಶುದ್ಧಮಾಡಿ ನೀಡಿದ ವಿದ್ವಾನ್ ಆಲೂರು ವಾಮನಾಚಾರ್ಯರಿಗೆ, ಮುಖಪುಟ ವಿನ್ಯಾಸ ಮಾಡಿದ ಶ್ರೀ ಗೋಪಾಲಕೃಷ್ಣನಿಗೆ ಹಾಗೂ ಮುದ್ರಣಕಾರ್ಯವನ್ನು ಅಚ್ಚುಕಟ್ಟಾಗಿ ಮಾಡಿಕೊಟ್ಟ ವಾಗರ್ಥದವರಿಗೆ ಹಾರ್ದಿಕವಾದ ಕೃತಜ್ಞತೆಗಳು.

**ಡಾ॥ ಕೃಷ್ಣಾಚಾರ್ಯ ಉಪಾಧ್ಯಾಯ**
**ಡಾ॥ ಬಿ.ಆರ್. ವೆಂಕಟೇಶಾಚಾರ್ಯ**

# श्रीकृष्णद्वैपायनप्रणीतानि ब्रह्मसूत्राणि

## तृतीयाध्यायस्य प्रथमः पादः

(१) तदन्तराधिकरणम्

ॐतदन्तरप्रतिपत्तौ रंहति सम्परिष्वक्तः प्रश्ननिरूपणाभ्याम्ॐ ॥ १ ॥

(२) त्र्यात्मकत्वाधिकरणम्

ॐत्र्यात्मकत्वात्तु भूयस्त्वात्ॐ ॥ २ ॥

(३) प्राणगत्यधिकरणम्

ॐप्राणगतेश्चॐ ॥ ३ ॥

(४) अग्न्याद्यधिकरणम्

ॐअग्न्यादिगतिश्रुतेरिति चेन्न भाक्तत्वात्ॐ ॥ ४ ॥

(५) प्रथमाधिकरणम्

ॐप्रथमेऽश्रवणादिति चेन्न ता एव ह्युपपत्तेःॐ ॥५॥

(६) अश्रुतत्वाधिकरणम्

ॐअश्रुतत्वादिति चेन्नेष्टादिकारिणां प्रतीतेःॐ ॥ ६ ॥

(७) भाक्ताधिकरणम्

ॐभाक्तं वाऽनात्मवित्त्वात्तथा हि दर्शयतिॐ ॥ ७ ॥

(८) कृतात्ययाधिकरणम्

ॐकृतात्ययेऽनुशयवान्दृष्टस्मृतिभ्याम्ॐ ॥ ८ ॥

(९) यथेताधिकरणम्

ॐयथेतमनेवं चॐ ॥ ९ ॥

(१०) चरणाधिकरणम्

ॐचरणादिति चेन्न तदुपलक्षणार्थेति कार्ष्णाजिनिःॐ ॥ १० ॥

ॐआनर्थक्यमिति चेन्न तदपेक्षत्वात्ॐ ॥ ११ ॥

ॐसुकृतदुष्कृते एवेति तु बादरिःॐ ॥ १२ ॥

(११) अनिष्टाधिकरणम्

ॐअनिष्टादिकारिणामपि च श्रुतम्ॐ ॥ १३ ॥

ॐसंयमने त्वनुभूयेतरेषामारोहावरोहौ तद्गतिदर्शनात्ॐ ॥ १४ ॥

ॐस्मरन्ति चॐ ॥ १५ ॥

(१२) अपिसप्ताधिकरणम्

ॐअपि सप्तॐ ॥ १६ ॥

(१३) तत्राप्यधिकरणम्

ॐतत्रापि च तद्व्यापारादविरोधःॐ ॥ १७ ॥

(१४) विद्याधिकरणम्

ॐविद्याकर्मणोरिति तु प्रकृतत्वात्ॐ ॥ १८ ॥

(१५) न तृतीयाधिकरणम्

ॐन तृतीये तथोपलब्धेःॐ ॥ १९ ॥

ॐस्मर्यतेऽपि च लोकेॐ ॥ २० ॥

ॐदर्शनाच्चॐ ॥ २१ ॥

ॐतृतीये शब्दावरोधः संशोकजस्यॐ ॥ २२ ॥

ॐस्मरणाच्चॐ ॥ २३ ॥

(१६) तत्स्वाभाव्याधिकरणम्

ॐतत्स्वाभाव्यापत्तिरुपपत्तेःॐ ॥ २४ ॥

(१७) नातिचिरेणाधिकरणम्

ॐनातिचिरेण विशेषात्ॐ ॥ २५ ॥

(१८) अन्याधिकरणम्

ॐअन्याधिष्ठिते पूर्ववदभिलापात्ॐ ॥ २६ ॥

ॐअशुद्धमिति चेन्न शब्दात्ॐ ॥ २७ ॥

(१९) रेतोऽधिकरणम्

ॐरेतःसिग्योगोऽथॐ ॥ २८ ॥

(२०) योन्यधिकरणम्

ॐयोनेः शरीरम्ॐ ॥ २९ ॥

॥ इति तृतीयाध्यायस्य प्रथमः पादः ॥

## द्वितीयः पादः

(१) सन्ध्याधिकरणम्

ॐसन्ध्ये सृष्टिराह हिॐ ॥ १ ॥

ॐनिर्मातारं चैके पुत्रादयश्चॐ ॥ २ ॥

ॐमायामात्रं तु कार्त्स्न्येनानभिव्यक्तस्वरूपत्वात्ॐ ॥ ३ ॥

ॐसूचकश्च हि श्रुतेराचक्षते च तद्विदःॐ ॥ ४ ॥

(२) पराभिध्यानाधिकरणम्

ॐपराभिध्यानात्तु तिरोहितं ततो ह्यस्य बन्धविपर्ययौ ॐ ॥ ५ ॥

(३) देहयोगाधिकरणम्

ॐदेहयोगाद्वासोऽपिॐ ॥ ६ ॥

(४) तदभावाधिकरणम्

ॐतदभावो नाडीषु तच्छ्रुतेरात्मनि हि ॐ ॥ ७ ॥

(५) प्रबोधाधिकरणम्

ॐअतः प्रबोधोऽस्मात्ॐ ॥ ८ ॥

(६) कर्मानुस्मृत्यधिकरणम्

ॐस एव च कर्मानुस्मृतिशब्दविधिभ्यःॐ ॥ ९ ॥

(७) सम्पत्त्यधिकरणम्

ॐमुग्धेऽर्धसम्पत्तिः परिशेषात्ॐ ॥ १० ॥

(८) नस्थानतोऽप्यधिकरणम्

ॐन स्थानतोऽपि परस्योभयलिङ्गं सर्वत्र हिॐ ॥११॥

ॐन भेदादिति चेन्न प्रत्येकमतद्वचनात्ॐ ॥ १२ ॥

ॐअपि चैवमेकेॐ ॥ १३ ॥

(९) अरूपाधिकरणम्

ॐअरूपवदेव हि तत्प्रधानत्वात्ॐ ॥ १४ ॥

ॐप्रकाशवच्चावैयर्थ्यम्ॐ ॥ १५ ॥

ॐआह च तन्मात्रम्ॐ ॥ १६ ॥

ॐदर्शयति चाथो अपि स्मर्यतेॐ ॥ १७ ॥

(१०) उपमाधिकरणम्

ॐअत एव चोपमा सूर्यकादिवत्ॐ ॥ १८ ॥

(११) अम्बुवदधिकरणम्

ॐअम्बुवदग्रहणात्तु न तथात्वम्ॐ ॥ १९ ॥

(१२) वृद्धिह्रासाधिकरणम्

ॐवृद्धिह्रासभाक्त्वमन्तर्भावादुभयसामञ्जस्यादेवम्ॐ ॥ २० ॥

ॐदर्शनाच्चॐ ॥ २१ ॥

(१३) पालकत्वाधिकरणम्

ॐप्रकृतैतावत्त्वं हि प्रतिषेधति ततो ब्रवीति च भूयःॐ ॥ २२ ॥

(१४) अव्यक्तत्वाधिकरणम्

ॐतदव्यक्तमाह हिॐ ॥ २३ ॥

ॐअपि संराधने प्रत्यक्षानुमानाभ्याम्ॐ ॥ २४ ॥

ॐप्रकाशवच्चावैशेष्यम्ॐ ॥ २५ ॥

ॐप्रकाशश्च कर्मण्यभ्यासात्ॐ ॥ २६ ॥

ॐअतोऽनन्तेन तथा हि लिङ्गम्ॐ ॥ २७ ॥

(१५) उभयव्यपदेशाधिकरणम्

ॐउभयव्यपदेशात्त्वहिकुण्डलवत्ॐ ॥ २८ ॥

ॐप्रकाशाश्रयवद्वा तेजस्त्वात्ॐ ॥ २९ ॥

ॐपूर्ववद्वाॐ ॥ ३० ॥

ॐप्रतिषेधाच्चॐ ॥ ३१ ॥

(१६) परमता(परानन्दा)धिकरणम्

ॐपरमतः सेतून्मानसम्बन्धभेदव्यपदेशेभ्यःॐ ॥३२॥

ॐदर्शनात्ॐ ॥ ३३ ॥

ॐबुद्ध्यर्थः पादवत्ॐ ॥ ३४ ॥

(१७) स्थानविशेषाधिकरणम्

ॐस्थानविशेषात्प्रकाशादिवत्ॐ ॥ ३५ ॥

ॐउपपत्तेश्चॐ ॥ ३६ ॥

(१८) तथान्यत्वाधिकरणम्

ॐतथाऽन्यत्प्रतिषेधात्ॐ ॥ ३७ ॥

(१९) सर्वगतत्वाधिकरणम्

ॐअनेन सर्वगतत्वमायामयशब्दादिभ्यःॐ ॥ ३८ ॥

(२०) फलाधिकरणम्

ॐफलमत उपपत्तेःॐ ॥ ३९ ॥

ॐश्रुतत्वाच्चॐ ॥ ४० ॥

ॐधर्मं जैमिनिरत एवॐ ॥ ४१ ॥

ॐपूर्वं तु बादरायणो हेतुव्यपदेशात्ॐ ॥ ४२ ॥

॥ इति तृतीयाध्यायस्य द्वितीयः पादः ॥

# विषयानुक्रमणिका



## तृतीयाध्यायस्य प्रथमः पादः

## तृतीयाध्यायस्य द्वितीयः पादः

श्री आनन्दतीर्थभगवत्पादाचार्यविरचितम्

# ब्रह्मसूत्रभाष्यम्

## अथ तृतीयाध्यायस्य प्रथमः पादः

### १. तदन्तराधिकरणम्

॥ श्रीगुरुभ्यो नमः ॥ हरिः ॐ । साधनविचारोऽयमध्यायः । वैराग्याय गत्यादिनिरूपणा प्रथमपादे । भूतबन्धो हि बन्धः ।

'भूतबन्धस्तु संसारो मुक्तिस्तेभ्यो विमोचनम्' इति च वाराहे ।

तच्च मरणे भवति ।

'भूतानां विनिवृत्तिस्तु मरणं समुदाहृतम् ।
भूतानां सम्प्रयोगश्च जनिरित्येव पण्डितैः' इति च भारते ॥

अतः किं साधनैरित्यत आह—

**॥ ॐ तदन्तरप्रतिपत्तौ रंहति सम्परिष्वक्तः प्रश्ननिरूपणाभ्याम् ॐ ॥ १ ॥**

शरीरान्तरप्रतिपत्तौ भूतसम्परिष्वक्त एव गच्छति ।

'वेत्थ यथा पञ्चम्यामाहुतावापः पुरुषवचसो भवन्ति' ।

'इति तु पञ्चम्यामाहुतावापः पुरुषवचसो भवन्ति' (छां.उ.५-३-९) इति प्रश्नपरिहाराभ्याम् ॥

श्री त्रिविक्रमपण्डिताचार्यविरचिता तत्त्वप्रदीपिका

साधनविचारोऽयमध्यायः । अयमुपक्रम्यमाणोऽध्यायो मोक्षसाधनविचारात्मकः । वेदसमन्वयसिद्धः सर्वकर्ता समानाभ्यधिकरहितो नारायण इति प्रतिपादितम् । तत्प्राप्तिश्च मोक्षो विवक्षितः । अतस्तत्साधनं विचार्यतेऽस्मिन्नध्याये । नन्वेवमादित एवाऽऽदरतः साधनमीमांसा कर्तव्या ।

(तत्त्वप्रदीपिका)

**मोक्षप्रयोजनापेक्षिणोऽधिकारिणो मोक्षफलेऽस्मिञ्छास्त्रे** साधनायत्तत्वात्तस्य । स्यादेतदेवं, यदि साधनानुष्ठानमात्रान्मोक्षोऽभिप्रेयते । यथा कर्ममीमांसकमन्यैः । वयं तु नारायणप्रसादादेव हि मोक्षं तत्साधनानुष्ठानं वा ब्रूमः । तथा च भगवानतःशब्दार्थं विवृण्वान आह– **यतो नारायणप्रसादमृते न मोक्ष इत्यादि ।**

'परस्य ब्रह्मणो विष्णोः प्रसादादिति वा भवेत् ।
स हि सर्वमनोवृत्तिप्रेरकः समुदाहृत' इति च ॥

विधित्सितानां च भक्तिश्रवणादीनां साधनानां स एव विषयः । अतो यत्प्राप्तिरूपो मोक्षः, यद्विषयाणि च साधनान्यनुष्ठेयानि विधीयन्ते, यद्दर्शनं च साक्षान्मोक्षसाधनं सत्तत्स्वरूपनिर्धारणायत्तं, यदिच्छया च सर्वं स एव नारायणः प्रथमविचार्यः । तद्गुणपूर्तिविरोधे च परिह्रियमाणे प्राणस्वरूपपरीक्षायां प्राप्तायां तद्याथार्थ्यसंवेदनेन तद्देवताप्रसादमापाद्य तदायत्तो वैराग्यादिस्तत्प्राप्त्युपायश्चिन्त्यत इत्यतिसुन्दरम् ।

तच्च साधनं साक्षादपरोक्षज्ञानम् । 'दृष्ट्वैव तं मुच्यते नापरेण' 'तमेवं विदित्वा अतिमृत्युमेति' 'तमेवं विद्वानमृत इह भवति' 'यस्य प्रसादात्' 'न तादृशी प्रीतिरीड्यस्य विष्णोः' इत्यादिश्रुतेः । 'विद्यैव तु निर्धारणात्' इत्यादेश्च लोकन्यायसिद्धत्वाच्च सादरदृष्ट्या प्रसन्नात्प्रभोरभिमतलाभस्य । तत्साधनमुपासना । 'आत्मा वाऽरे द्रष्टव्यः श्रोतव्यो मन्तव्यो निदिध्यासितव्यः' 'प्रकाशश्च कर्मण्यभ्यासात्' इत्यादेः । निरन्तरचिन्तनमन्तरेणानन्तदर्शन-प्रतिबन्धकस्य सन्ततस्य कर्मणोऽनुप-मर्दनीयत्वाच्च । सा च भक्त्यायत्ता । 'भक्त्या त्वनन्यया शक्य अहमेवंविधोऽर्जुन । ज्ञातुं द्रष्टुं च तत्वेन प्रवेष्टुं च परन्तप ॥' 'अनुबन्धादिभ्यः' 'भूयस्त्वात्त्वनुबन्धः' 'अम्बुवदग्रहणात्तु न तथात्वम्' इत्यादेः । विना च तया निरन्तरस्मृतिरूपस्योपासनस्यानाप्यत्वात् । अभक्तध्यानस्य दृष्ट्यनापाद-कत्वाच्च । सा चैकान्तिकी विना संसारवैराग्यान्न परिपच्यते । आनुभाविकानुभवपरिचितसांसारिक-विषयानुषक्ते मनसि तत्संस्काराणां दृढीयस्तया भक्तेः पदविन्यासावसरासम्भवात् । 'अभ्यासेन तु कौन्तेय वैराग्येण च गृह्यते' 'इन्द्रियार्थेषु वैराग्यं' 'विज्ञाय ज्ञातवैराग्यो विष्णुपादैकसंश्रयः' इत्यादिवचनात् । 'ऊर्ध्वरेतस्तु' इत्यादेश्च । तस्मादेतानि चत्वारि चतुर्षु पादेषु साधयितव्यानि ।

तत्र वैराग्योत्पादनार्थं स्वर्गनरकगतिभुक्त्यागतीनां तमोगतेर्गर्भवासस्य च निरूपणा क्रियते प्रथमपादे । संसारविरक्ते मनसि संसारमोचके भगवति भक्तिस्सुप्रतिपादेति भक्तिर्द्वितीये प्रतिपाद्यते ।

(तत्त्वप्रदीपिका)

न ह्यविरक्तस्य विषयाभिलाषकलुषीकृतेऽन्तःकरणे भक्तिरकृशा भवति । यया भगवद्गुणश्रवणादि-परिबृंहितया तदुपास्तिमेवाऽपरोक्ष्यफलामभिवाञ्छेत् । भक्तस्य चाधिकारिणो गुरुशुश्रूषोः श्रवणमननवत उपास्तिश्शक्येति सा तृतीये प्रदर्श्यते । न ह्यभक्तस्य बलवद्गुणस्मृतिवासनाविहीनस्य गाढोपास्तिस्समस्ति । तस्यां च परिपच्यमानायां वैशद्येनोत्पद्यमानं दर्शनं चतुर्थे सामर्थ्यतो वर्ण्यते । न हि विजातीयप्रत्ययानन्तरितसजातीयप्रत्ययप्रवाहात्मिकामुपास्तिमन्तरेण तदापरोक्ष्यं लभ्यत इति साधनाक्षेपपरिहाररूपतयाऽवतारयन्नत्र सूत्रमैकान्तिकतयाऽवश्यं सम्पादनीयत्वं साधनानां प्रकाशयति । अतो न मरणमात्रेण मुच्यते पुरुषः । किन्तु भूतसम्परिष्वक्तो मरणानन्तरं गच्छतीत्युक्त्वा मोक्षस्य मरणातिरिक्तकारणायत्तत्वं प्रदर्श्य साधनविचारस्य प्रयोजकत्वप्रतिपादनात्मकमिदमधि-करणं, स्वर्गादिगतिनिरूपणया वैराग्याख्यप्रथमसाधनप्रतिपादनारम्भात्मकं च भवति ।

**ॐ तदन्तरप्रतिपत्तौ रंहति सम्परिष्वक्तः प्रश्ननिरूपणाभ्याम् ॐ ।** तच्छब्दः शरीरपरामर्शी, तस्यानन्तरातीताधिकरणेऽवयवशः प्रस्तुतत्वात् । ऐहिकशरीरान्निष्क्रम्य शरीरान्तरं यदा प्रतिपत्स्यते तदा सम्परिष्वक्तो धावति । कैः? भूतैः । तेषामपि शरीरारम्भकत्वेन प्रस्तुतत्वात् । सम्परिष्वक्त इति वचनान्मुक्तिपर्यन्तं परिष्वक्त एव । 'वेत्थ यथा' इत्यादि प्रवाहणस्य राज्ञः पण्डितम्मन्यं श्वेतकेतुं प्रति परीक्षार्थं प्रश्नः । अनुशिक्षितश्चेदसि कुमार! तथा वेत्थ किम्? यथा पञ्चम्यामाहुतावापः पुरुषवचसो भवन्तीति पृष्टे तदुत्तरापरिज्ञानाद् व्रीडयाऽपसृत्यानुशोचतः श्वेतकेतोः सिद्ध्यर्थं प्रस्थितेन तत्पित्रोद्दालकेन पृष्टस्य तस्यैव राज्ञः प्रतिवचनपरिसमाप्तिः 'इति तु पञ्चम्यामाहुतावाप' इत्यादिः । अत्र हि 'असौ वाव लोको गौतमाग्निस्तस्मिन्नेतस्मिन्नग्नौ देवाः श्रद्धां जुह्वति' इत्यादिना द्युपर्जन्यपृथिवीपुरुषयोषासु पञ्चसु हुतस्थानत्वेनाग्निशब्दभाक्षु स्वकृतभोगप्रतित्सयोत्क्रामितेष्टादिकृत्पुरुषपरिष्वङ्गिण्य आपः क्रमेण हूयन्ते प्रक्षिप्यन्त इत्यर्थः । श्रद्धासोमवर्षान्न रेतस्सम्पर्कात्तत्तच्छब्दोदितास्ता आपः । पञ्चम्यामाहुतौ शुक्रशोणितसंयोगारब्ध-पुरुषशरीरोपचिताः पुरुषशब्दवाच्या भवन्ति ।

## श्रीजयतीर्थविरचिता तत्त्वप्रकाशिका

एतदध्यायप्रतिपाद्यं दर्शयति ॥ **साधनेति** ॥ अथातो ब्रह्मजिज्ञासेति सूत्रे सङ्क्षेपेण शास्त्रार्थे सूचिते किं तद्ब्रह्मेति शङ्कायां तत्स्वरूपं द्वितीयसूत्रे निगदितं तदध्यायशेषेण समर्थितम् । तत्र विरोधाश्च द्वितीये परिहृताः । एवं चेत्किं मया कार्यमित्याशङ्कायां अथब्रह्मजिज्ञासापदाभ्यां

